# ಸವದತ್ತಿಯ ರಟ್ಟರ ಶಾಸನಗಳು : ಒಂದು ಅಧ್ಯಯನ

(೨೦೧೭-೧೮ ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)


ಸಂಶೋಧನಾ ವಿದ್ಯಾರ್ಥಿ

ಮಾರುತಿ ನೀಲಪ್ಪಾ ಕೋಳಿಗುಡ್ಡೆ

ನೋಂದಣಿ ಸಂಖ್ಯೆ : ೧೬೨೧೯೦೩೦೦೧೫

ಮಾರ್ಗದರ್ಶಕರು

ಡಾ. ಅಮರೇಶ ಯತಗಲ್

ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು





ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬



೨೦೧೭-೧೮

# ಸವದತ್ತಿಯ ರಟ್ಟರ ಶಾಸನಗಳು : ಒಂದು ಅಧ್ಯಯನ

(ಎಂ.ಫಿಲ್. ಅಧ್ಯಯನಕ್ಕಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಎಂ.ಫಿಲ್. ನಿಬಂಧ)



**ಸಂಶೋಧನಾ ವಿದ್ಯಾರ್ಥಿ**

**ಮಾರುತಿ ನೀಲಪ್ಪಾ ಕೋಳಿಗುಡ್ಡೆ**

**ನೋಂದಣಿ ಸಂಖ್ಯೆ : ೧೭೦೧೦೯೦೩೦೦೧೫**

**ಮಾರ್ಗದರ್ಶಕರು**

**ಡಾ. ಅಮರೇಶ ಯತಗಲ್**

ಸಹ ಪ್ರಾಧ್ಯಾಪಕರು, ಹಾಗೂ ಮುಖ್ಯಸ್ಥರು.




ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ,

ವಿದ್ಯಾರಣ್ಯ – ೫೮೩ ೨೭೬

೨೦೧೭-೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

**"ಸವದತ್ತಿಯ ರಟ್ಟರ ಶಾಸನಗಳು : ಒಂದು ಅಧ್ಯಯನ"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ೨೦೧೭-೧೮ನೆಯ ಸಾಲಿನ ಎಂ.ಫಿಲ್ ಪದವಿಗಾಗಿ **ಮಾರುತಿ ನೀಲಪ್ಪಾ ಕೋಳಿಗುಡ್ಡೆ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

(ಡಾ. ಅಮರೇಶ ಯತಗಲ್) 31·08·18
ಮಾರ್ಗದರ್ಶಕರು

ಮುಖ್ಯಸ್ಥರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 31-08-2018

## ಸಂಶೋಧಕರ ಪ್ರಮಾಣ ಪತ್ರ

**"ಸವದತ್ತಿಯ ರಟ್ಟರ ಶಾಸನಗಳು : ಒಂದು ಅಧ್ಯಯನ"** ಎಂಬ ನಿಬಂಧವನ್ನು **ಡಾ. ಅಮರೇಶ ಯತಗಲ್, ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು,** ಶಾಸನಶಾಸ್ತ್ರ ವಿಭಾಗ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ೨೦೧೭–೧೮ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಹಿ

**(ಮಾರುತಿ ನೀಲಪ್ಪಾ ಕೋಳಿಗುಡ್ಡೆ )**
ಸಂಶೋಧನ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 31-08-2018

# ಪರಿವಿಡಿ

# ಅಧ್ಯಾಯ–೧ ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಅಧ್ಯಯನದ ಸ್ವರೂಪ

# ಅಧ್ಯಾಯ ೧

## ೧.೧ ಪ್ರಸ್ತಾವನೆ

ಒಂದು ನಾಡಿನ ಇತಿಹಾಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ಬಹು ಪ್ರಚಲಿತವಾಗಿದೆ. ಇತಿಹಾಸವನ್ನು ಚಿತ್ರಿಸುವ ಗ್ರಂಥಗಳಲ್ಲಿ ಈ ರಾಜಕೀಯ ಇತಿಹಾಸವೇ ಪ್ರಧಾನವಾಗಿದ್ದು, ಗ್ರಂಥದ ಕೊನೆಯಲ್ಲಿ ಆ ನಾಡಿನ ಕಲೆ, ಧರ್ಮ ಇತ್ಯಾದಿಗಳನ್ನು ಕುರಿತ ವಿಷಯಗಳ ಒಂದು ಅನುಬಂಧದ ರೂಪದಲ್ಲಿರುವುದುಂಟು. ಅಥವಾ ಅವುಗಳನ್ನು ನಿರೂಪಿಸುವ ಒಂದೆರೆಡು ಅಧ್ಯಾಯಗಳು ಬಂದಿರುವುದುಂಟು. ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ. ಅಲ್ಲಿ ಬದುಕಿದ ಜನ, ಹೀಗೆ ಬದುಕಿದ ಜನರ ಒಂದು ಗಣನೀಯವಾದ ಭಾಗ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಅದರ ಜೀವನ ಮೌಲ್ಯಗಳು, ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಮಾಜಿಕ ಅಧ್ಯಯನವೆಂದು, ಸಾಂಸ್ಕೃತಿಕ ಅಧ್ಯಯನವೆಂದು ಕರೆಯಬಹುದು. ಇಂತಹ ಅಧ್ಯಯನವು ರಾಜಕೀಯ ಅಧ್ಯಯನಕ್ಕಿಂತ ಶ್ರೇಷ್ಠವೆನ್ನುವ ಭಾವನೆ ನಮಗಿಲ್ಲ. ನಿಜವಾದ ವಿದ್ಯಾರ್ಥಿಗೆ ಯಾವ ಅಧ್ಯಯನವು ಇನ್ನೊಂದಕ್ಕಿಂತ ಹೆಚ್ಚಲ್ಲ, ಕಡಿಮೆಯೂ ಅಲ್ಲ.

ಒಂದು ನಾಡಿನ ಚರಿತ್ರೆಯೆಂದರೆ ಅಲ್ಲಿ ಬಾಳಿದ ಜನಾಂಗದ ಚರಿತ್ರೆ. ಇಂತಹ ಜನಾಂಗ ಒಂದೆಡೆ ನಿಂತು ವಿಶಿಷ್ಟ ಬದುಕನ್ನು ಬದುಕಿರುತ್ತವೆ. ವಿಶಿಷ್ಟ ಸಂಸ್ಕೃತಿಯನ್ನು ಬೆಳೆಸಿರುತ್ತವೆ. ಈ ಸಮಷ್ಟಿ ಸಂಸ್ಕೃತಿಯನ್ನು ಬೆಳೆಸಿರುತ್ತದೆ. ಈ ಸಮಷ್ಟಿ ಸಂಸ್ಕೃತಿಯನ್ನು ರೂಪಿಸುವಲ್ಲಿ ಆಯಾ ಜನಾಂಗಗಳಿಗೆ ಆಶ್ರಯ ನೀಡಿದ ಗ್ರಾಮ ಪಟ್ಟಣಗಳು ಮಹತ್ವದ ಪಾತ್ರ ವಹಿಸುತ್ತವೆ. ಈ ಮಾತಿಗೆ ಇತಿಹಾಸ ಪ್ರಸಿದ್ಧವಾದ ನಲಂದ, ವಿಕ್ರಮಶಿಲಾ ಇವು ಸಾಮಾಜಿಕ ಮತ್ತು ಶೈಕ್ಷಣಿಕ ವಿದ್ಯಾಕೇಂದ್ರಗಳಾಗಿ ಪ್ರಸಿದ್ಧಿ ಪಡೆದಿದ್ದವು. ಅದೇ ರೀತಿಯಾಗಿ ಕಾಶಿ, ಶೃಂಗೇರಿ, ಶ್ರವಣಬೆಳಗೊಳ, ಇವು ಧಾರ್ಮಿಕ ಪುಣ್ಯಕ್ಷೇತ್ರಗಳಾಗಿದ್ದವು. ಶಾತವಾಹನ, ಬಾದಾಮಿ ಚಾಲುಕ್ಯರು, ಕದಂಬರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯ, ಮುಂತಾದ ಪಟ್ಟಣಗಳನ್ನು ಹೆಸರಿಸಬಹುದು. ಇಂತಹ ಪಟ್ಟಣಗಳು ಆ ನಾಡಿನ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ ನೆಲೆಬೆಲೆಗಳನ್ನು ಪ್ರತಿನಿಧಿಸುತ್ತವೆ. ಒಟ್ಟಿನಲ್ಲಿ ಈ ಸ್ಥಳಗಳು ಸಂಸ್ಕೃತಿಯ ಸಂವೇದನೆಯ ಭೌತಿಕ ಪಟ್ಟಣಗಳೆನಿಸದೆ ಬೌದ್ಧಿಕ ಪಟ್ಟಣಗಳೆನಿಸಿ ನಾಡು ನುಡಿಯಾಗಿ ನಿಲ್ಲುತ್ತವೆ.

ಕಳೆದ ದಶಕಗಳಿಂದ ಇತಿಹಾಸವನ್ನು ನೋಡುವ ದೃಷ್ಟಿಯಲ್ಲಿ ಗಮನಾರ್ಹವಾದ ಬದಲಾವಣೆಗಳಾಗುತ್ತಿವೆ. ಇತಿಹಾಸ ರಚನೆಯ ಆಕರಗಳನ್ನು ಹೊಸ ಹೊಸ ರೀತಿಯಿಂದ ಅವುಗಳ ವಿವಿಧ ಮಗ್ಗಲುಗಳನ್ನು ಅಭ್ಯಸಿಸುವ ದೃಷ್ಟಿಕೋನ ಬೆಳೆದಿದೆ. ಕೇವಲ ರಾಜಕೀಯ ಚರಿತ್ರೆಯ ಅಧ್ಯಯನ ಮಾತ್ರವಲ್ಲದೆ ಸಾಂಸ್ಕೃತಿಕ ಇತಿಹಾಸ ರಚನೆಯ ಹಾದಿ ಹಿಡಿದಿರುವುದು ಕಂಡುಬರುತ್ತದೆ. ಎಲ್ಲಾ ಕ್ಷೇತ್ರದ ವಿದ್ವಾಂಸರೂ ಸಹ ಹಲವು ರೀತಿಗಳಲ್ಲಿ ಇತಿಹಾಸದ ಕಡೆಗೆ ಗಮನ ತೋರುತ್ತಿದ್ದಾರೆ. ಈ ಕಾರಣದಿಂದಾಗಿ ಇತಿಹಾಸ ಜನಾನುಮತವನ್ನು ಪಡೆದು ಸಾಮಾನ್ಯ ಜನರಲ್ಲಿ ಇತಿಹಾಸದ ಬಗೆಗೆ ಅರಿವು ಮೂಡುತ್ತದೆ. ಇದರ ಫಲವಾಗಿ ಐತಿಹಾಸಿಕ ಆಕರಗಳನ್ನು ಪ್ರಮುಖವೆನಿಸುವ ಶಾಸನಗಳನ್ನು ಐತಿಹಾಸಿಕ ನಗರ ಪಟ್ಟಣಗಳನ್ನು ವಿವಿಧ ದೃಷ್ಟಿಕೋನದಲ್ಲಿ ಅಧ್ಯಯನ ಮಾಡುವುದಾಗಿದೆ.

ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಬೆಳಗಾವಿ ಜಿಲ್ಲೆಯ ವಿಶಿಷ್ಟ ಕೊಡುಗೆಯಿದೆ. ಶಾಸನಗಳಲ್ಲಿ ಬೆಳಗಾವಿ ಜಿಲ್ಲೆಯ ರಾಜಕೀಯ ಚರಿತ್ರೆಯಲ್ಲಿ ಶಾತವಾಹನ, ಆದಿಕದಂಬ, ಗಂಗ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟ, , ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯನಗರ, ಭೈಸ, ಟ್ಟ, ಗೋವಾ ಕದಂಬರು, ಕೊಲ್ಹಾಪುರದ ಶಿಲಾಹಾರ ಅರಸು ಮನೆತನಗಳು ಮುಖ್ಯವಾಗಿ ಗೋಚರಿಸುತ್ತವೆ. ಈ ಕಾಲದಲ್ಲಿ ವಿಭಿನ್ನ ಆಡಳಿತ ಪ್ರಾಂತ್ಯಗಳು ಇಂದು ಹತ್ತು ತಾಲ್ಲೂಕುಗಳನ್ನೊಳಗೊಂಡ ಬೆಳಗಾವಿ ಜಿಲ್ಲೆಯಲ್ಲಿ ಒಳಗೊಂಡಿದ್ದವು. ಈ ಜಿಲ್ಲೆಯ ಶಾಸನಗಳಿಂದ ಗುವಂತಹ ಮಾಹಿತಿಯನ್ನು ಕುರಿತು ಮುಂದಿನ ಅಧ್ಯಯನ ಕೈಗೊಳ್ಳಲಾಗುವುದು.

ಈ ಹಿನ್ನೆಲೆಯಲ್ಲಿ ನಮ್ಮ ಸಂಸ್ಕೃತಿಯ ಮೂಲ ಬೇರುಗಳು ಇಂದಿಗೂ ಹಳ್ಳಿಗಳಲ್ಲಿ ಕಂಡುಬರುವ ಜಾನಪದ ಸಾಹಿತ್ಯ, ಐತಿಹ್ಯಗಳು, ಶಾಸನಗಳು, ದೇವಾಲಯಗಳು, ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳು ಇದಕ್ಕೆ ಸಾಕ್ಷಿಯಾಗಿವೆ. ಆದರೆ ಇವು ಇಂದು ಕಾಲನ ದವಡೆಗೆ ಮರೆಯಾಗುತ್ತಲಿದೆ. ಇಂತಹ ಒಂದು ಸಾಂಸ್ಕೃತಿಕ ಚರಿತ್ರೆಯನ್ನು ಹೊಂದಿರುವ ತಾಲ್ಲೂಕು ಬೆಳಗಾವಿ ಜಿಲ್ಲೆಯ ಸವದತ್ತಿ. ಇಲ್ಲಿ ಇಂದಿಗೂ ಪ್ರಾಚೀನ ಸಂಸ್ಕೃತಿಯ ಕುರುಹುಗಳಾದ ಶಾಸನಗಳು, ವೀರಗಲ್ಲುಗಳು, ದೇವಾಲಯಗಳು, ಬಸದಿಗಳು, ಕೋಟೆಗಳು, ಕೆರೆಗಳು ಹಾಗೂ ಸ್ಮಾರಕಗಳು ದೊರೆಕಿವೆ. ಸವದತ್ತಿಯನ್ನೆ ಮೂಲ ಆಕರವಾಗಿಸಿಕೊಂಡು ದೊರೆಯುವ ಶಾಸನಗಳನ್ನು ಕುರಿತು ಅಧ್ಯಯನ ಮಾಡಲಾಗುವುದು.

## ೧.೨ ಅಧ್ಯಯನದ ಉದ್ದೇಶ

ಇತಿಹಾಸ ಅಧ್ಯಯನವು ಇಂದು ರಾಜಮನೆತನಗಳ ಅಧ್ಯಯನವಾಗದೆ ಜನಸಾಮಾನ್ಯರ ಬದುಕಿನ ಅಧ್ಯಯನವಾಗಿ ವಿಸ್ತೃತಗೊಳ್ಳತೊಡಗಿದೆ. ಇದರಿಂದಾಗಿ ರಾಜರ ಇತಿಹಾಸವು ಗೌಣವಾಗಿ ಶ್ರೀಸಾಮಾನ್ಯರ ಬದುಕಿಗೆ ಅವರ ಇತಿಹಾಸಕ್ಕೆ ಮಹತ್ವ ದೊರೆಕಿದೆ. ಕರ್ನಾಟಕದಲ್ಲಿ ಇಂತಹ ಅಧ್ಯಯನಗಳು ಹೆಚ್ಚಾಗಿ ಕಂಡುಬರುತ್ತಿದ್ದು ಅವುಗಳ ಪ್ರೇರಣೆ ಈ ಅಧ್ಯಯನದ ಹಿಂದಿದೆ ಎಂದರೆ ತಪ್ಪಾಗಲಾರದು. ಪ್ರಸ್ತುತ ಅಧ್ಯಯನವು ಶಾಸನಗಳ ಹಿನ್ನೆಲೆಯಲ್ಲಿ ಸವದತ್ತಿಯ ರಟ್ಟರ ಶಾಸನಗಳ ಅಧ್ಯಯನ ಮಾಡುವ ಪ್ರಯತ್ನವಾಗಿದೆ.

ಬೆಳಗಾವಿ ಜಿಲ್ಲೆಯ ಶಾಸನಗಳು ದೇವಾಲಯಗಳ ಬಗ್ಗೆ ವ್ಯಾಪಕವಾದ ಅಧ್ಯಯನಗಳು ನಡೆದಿಲ್ಲ. ಇಲ್ಲಿ ದೊರೆತಿರುವ ಶಾಸನಗಳನ್ನು ಒಂದೆಡೆ ಸಂಗ್ರಹಿಸಿ ಅವುಗಳನ್ನು ಒಟ್ಟುಗೂಡಿಸಿಕೊಂಡು ಅಧ್ಯಯನ ಮಾಡಬೇಕೆಂಬ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ಬೆಳಗಾವಿ ಜಿಲ್ಲೆಯ ಸವದತ್ತಿಯ ತಾಲ್ಲೂಕಿನಲ್ಲಿ ನೂರಾ ಐವತ್ತಕ್ಕೂ ಹೆಚ್ಚು ಶಾಸನಗಳು ಕಂಡುಬರುತ್ತವೆ. ದಾನ ಶಾಸನಗಳ ಜೊತೆಗೆ ಕೆಲವೊಂದು ದೇವಾಲಯಗಳು, ಬಸದಿಗಳ ಉಲ್ಲೇಖವನ್ನು ಕಾಣಬಹುದು. ಈ ಶಾಸನಗಳಲ್ಲಿ ಬಹುಪಾಲು ಶಾಸನಗಳು ದಾನದತ್ತಿಯ ವಿಷಯವನ್ನೇ ಉಲ್ಲೇಖಿಸುತ್ತವೆ. ಈ ದಾನಶಾಸನಗಳ ಜೊತೆಗೆ ಅಲ್ಲಿಯ ದೇವಾಲಯಗಳು, ಸ್ಮಾರಕಗಳು, ಬಸದಿಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಲಾಗುತ್ತದೆ.

ಸವದತ್ತಿಯು ರಟ್ಟರ ಕಾಲದಲ್ಲಿ ರಚನೆಗೊಂಡ ಅನೇಕ ಶಾಸನಗಳು ಇಂದು ಜನರ ನಿರ್ಲಕ್ಷ್ಯದಿಂದಾಗಿ ಮನೆಯ ತಳಪಾಯದ ಕಲ್ಲುಗಳಾಗಿ ಹಾಗೂ ಬೀದಿಗೆ ಹಾಸುವ ಕಲ್ಲುಗಳಾಗಿವೆ. ಇನ್ನು ಮಿಕ್ಕವು ನೈಸರ್ಗಿಕ ವಿಕೋಪಕ್ಕೆ ಸಿಕ್ಕಿ ಕಾಲಗರ್ಭದಲ್ಲಿ ಅವಿತುಕೊಂಡು ಹೋಗಿವೆ. ಹೀಗಿದ್ದು ಕೂಡ ಗ್ರಾಮದಲ್ಲಿ ಕೆಲವು ಶಾಸನಗಳು, ದೇವಾಲಯಗಳು, ಬಸದಿಗಳು, ಕೆರೆಬಾವಿಗಳು, ಕೋಟೆಗಳು ಮುಂತಾದವುಗಳು ಇಂದಿಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ.

ಈ ಹಿನ್ನೆಲೆಯಲ್ಲಿ ಅಧ್ಯಯನದ ಕಾರ್ಯ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕಾಗಿದೆ. ಜೊತೆಗೆ ಲೇಖನ ಮತ್ತು ಗ್ರಂಥಗಳು ವಿಪುಲವಾಗಿ ಬರಬೇಕಾಗಿದೆ. ಇಲ್ಲಿನ ಸ್ಮಾರಕಗಳ ರಕ್ಷಣೆ ಕಾರ್ಯ ನಡೆಸುವ ಅವಶ್ಯಕತೆ ಇದೆ. ಶಾಸನಗಳಲ್ಲಿಯ ವಿಷಯವನ್ನು

ಅಧ್ಯಯನಕ್ಕೆ ಒಳಪಡಿಸಿಕೊಂಡು ಅವುಗಳಲ್ಲಿ ಕಂಡುಬರುವ ಅಂಶಗಳನ್ನು ವಿವರವಾಗಿ ಅಧ್ಯಯನ ಮಾಡಲಾಗುವುದು.

**೧.೩ ಅಧ್ಯಯನದ ವ್ಯಾಪ್ತಿ**

ಸಾಮಾನ್ಯ ಅರ್ಥದಲ್ಲಿ ವ್ಯಾಪ್ತಿ ಎಂದರೆ ಎಲ್ಲೆ, ಮೇರೆ, ಗಡಿ, ವೈಶಾಲ್ಯತೆ ಅಥವಾ ಸೀಮಾರೇಖೆ ಎಂದಾಗುತ್ತದೆ. ಯಾವುದೇ ಸಂಶೋಧನೆಗೆ ಒಂದು ಚೌಕಟ್ಟು ಅಂದರೆ ವ್ಯಾಪ್ತಿ ಬಹಳ ಮುಖ್ಯ. ನಿರ್ದಿಷ್ಟ ಹಾಗೂ ಉದ್ದೇಶಪೂರಕವಾದ ಸಂಶೋಧನೆ ಯಶಸ್ಸು ಕಾಣಬೇಕೆಂದರೆ ಅದಕ್ಕೆ ಒಂದು ಚೌಕಟ್ಟು ಅಗತ್ಯ. ಈ ಚೌಕಟ್ಟಿನ ಕ್ರಮಬದ್ಧತೆ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ವ್ಯಾಪ್ತಿಗಳಿಲ್ಲದ ಅಧ್ಯಯನವು ಗೊಂದಲಮಯವಾಗಿ ಸಂಶೋಧಕನ ಮಿತಿಯನ್ನು ತೀವ್ರಗೊಳಿಸುವುದಲ್ಲದೇ ಸಂಶೋಧಕನನ್ನು ದಾರಿತಪ್ಪಿಸುತ್ತದೆ. ಈ ಅಧ್ಯಯನದ ವ್ಯಾಪ್ತಿಯನ್ನು ಕ್ರಿ.ಶ. ೯೩೦ರಿಂದ ೧೨೨೮ರ ಅವಧಿಯಲ್ಲಿ ಸಿಗುವ 'ಸವದತ್ತಿಯ ರಟ್ಟರ ಕಾಲದ ಶಾಸನ'ಗಳಿಗೆ ಸೀಮಿತಗೊಳಿಸಲಾಗಿದೆ.

**೧.೪ ಅಧ್ಯಯನದ ವಿಧಾನ**

ಯಾವುದೇ ಒಂದು ಕಾರ್ಯವು ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿಮುಖ್ಯ. ಇದೇ ರೀತಿ ಸಂಶೋಧಕನ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನಕ್ರಮ ಬಹಳ ಅವಶ್ಯಕವಾದುದು. ಅಂತೆಯೇ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳುವ ಮುನ್ನ ಸವದತ್ತಿಯ ರಟ್ಟರಿಗೆ ಸಂಬಂಧಿಸಿದಂತೆ ಮಾಹಿತಿ ಪಡೆದುಕೊಳ್ಳಲಾಗುವುದು. ಈಗಾಗಲೇ ಸಂಶೋಧನೆ ಆಗಿರುವ ವಿಷಯಗಳೊಂದಿಗೆ ಮಾರ್ಗದರ್ಶಕರೊಂದಿಗೆ ಸಲಹೆಯನ್ನು ಪಡೆದುಕೊಂಡು ಮತ್ತು ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಯಿತು. ವಿಷಯದ ಆಯ್ಕೆಯ ನಂತರ ಸವದತ್ತಿಯ ರಟ್ಟರ ಶಾಸನಗಳಿಗೆ ಸಂಬಂಧಿಸಿದಂತೆ ವಿಷಯ ಸಂಗ್ರಹಿಸುವುದರ ಜೊತೆಗೆ ಅಲ್ಲಲ್ಲಿ ಬಂದ ಬಿಡಿಲೇಖನಗಳನ್ನು, ಪ್ರಬಂಧಗಳನ್ನು, ಪತ್ರಿಕಾ ವರದಿಗಳನ್ನು ಸಂಗ್ರಹಿಸಲಾಗುವುದು. ನಂತರ ಅಧ್ಯಯನ ಮಾಡಿ ಸವದತ್ತಿಯ ರಟ್ಟರ ಶಾಸನ ಮತ್ತು ಇತರ ಆಕರಗಳಿಂದ ದೊರೆತ ಅಂಶಗಳನ್ನು ಕಾಲಾನುಕ್ರಮದಲ್ಲಿ ದಾಖಲಿಸಿಕೊಳ್ಳಲಾಗುವುದು. ತದನಂತರ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿವಿಧ ಗ್ರಂಥಾಲಯಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಪಡೆಯಲಾಗುವುದು. ಬೆಳಗಾವಿ ಜಿಲ್ಲಾ ಕೇಂದ್ರ ಗ್ರಂಥಾಲಯ, ಸವದತ್ತಿ ಪಟ್ಟಣ ಪಂಚಾಯಿತಿ ಸಾರ್ವಜನಿಕ ಗ್ರಂಥಾಲಯ, ಕರ್ನಾಟಕ ವಿಶ್ವವಿದ್ಯಾಲಯದ (ಕೆ.ಆರ್.ಐ) ಗ್ರಂಥಾಲಯ ಹಾಗೂ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯಕ್ಕೆ ಭೇಟಿ ನೀಡಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಸನ ದಾಖಲೆಗಳನ್ನು ಮಾಹಿತಿಯನ್ನು

ಸಂಗ್ರಹಿಸಿಕೊಳ್ಳಲಾಗುವುದು. ವಿಷಯಕ್ಕೆ ಸಂಬಂಧಿಸಿದ ವಿದ್ವಾಂಸರ ಸಲಹೆಯನ್ನು ಪಡೆಯುವುದರ ಜೊತೆಗೆ ಮಾರ್ಗದರ್ಶಕರೊಂದಿಗೆ ವಿಷಯವನ್ನು ಕುರಿತು ಚರ್ಚಿಸಲಾಗುವುದು ಹಾಗೂ ವಿಷಯಕ್ಕೆ ಸಂಬಂಧಿಸಿದಂತೆ ಇತರೆಡೆ ದೊರೆತ ಅನೇಕ ಗ್ರಂಥಗಳನ್ನು ಸಂಗ್ರಹಿಸಿಕೊಂಡು ಅಧ್ಯಯನ ಕ್ಷೇತ್ರ ಕಾರ್ಯದೊಂದಿಗೆ ಕೈಗೊಳ್ಳಲಾಗುವುದು.

### ೧.೫ ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವು ತನ್ನದೇ ಆದಂತಹ ಮಹತ್ವವನ್ನು ಹೊಂದಿದೆ. ಜೊತೆಗೆ ವಿಶೇಷವೆನಿಸಿದ್ದು, ನಾನು ಕೈಗೊಂಡಿರುವ ವಿಷಯವಾದ **"ಸವದತ್ತಿಯ ರಟ್ಟರ ಶಾಸನಗಳು : ಒಂದು ಅಧ್ಯಯನ"** ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಲಾಗುವುದು. ಅಧ್ಯಯನದ ದೃಷ್ಟಿಯಿಂದ ಐದು ಅಧ್ಯಾಯಗಳನ್ನಾಗಿ ಮಾಡಲಾಗಿದೆ.

**ಒಂದನೆಯ ಅಧ್ಯಾಯವು,** ಪ್ರಬಂಧದ ಪ್ರಸ್ತಾವನೆಯಾಗಿದ್ದು, ಇದು ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪವನ್ನು ಒಳಗೊಂಡಿದೆ.

**ಎರಡನೆಯ ಅಧ್ಯಾಯವು,** ಸವದತ್ತಿಯ ರಟ್ಟರ ರಾಜಕೀಯ ಚರಿತ್ರೆ, ಮೂಲ, ಶಾಖೆಗಳು, ಸಾಮಂತರು, ರಟ್ಟರ ಅವನತಿ ಮುಂತಾದ ವಿಷಯದ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಮೂರನೆಯ ಅಧ್ಯಾಯವು,** ಧಾರ್ಮಿಕ ವ್ಯವಸ್ಥೆ ಆಗಿದ್ದು ಇದರಲ್ಲಿ ಜೈನರು, ಶೈವರು ಮತ್ತು ವೈಷ್ಣವರ ಹಾಗೂ ಆಗಿನ ಕಾಲದ ದೇವಾಲಯಗಳು, ಬಸದಿಗಳು, ಕೆರೆಬಾವಿಗಳು, ಕೋಟೆಗಳು ಮುಂತಾದವುಗಳ ಬಗೆಗಿನ ಅಧ್ಯಯನ ಮಾಡಲಾಗಿದೆ.

**ನಾಲ್ಕನೆಯ ಅಧ್ಯಾಯವು,** ರಟ್ಟರ ಕಾಲದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಕಂಡುಬರುವ ಸಾಮಾಜಿಕ ವ್ಯವಸ್ಥೆ, ಆಡಳಿತದಲ್ಲಿ ರಾಣಿಯರು, ಸ್ತ್ರೀಯರ ಶಿಕ್ಷಣ ವ್ಯವಸ್ಥೆ, ನೀರಾವರಿ ಪದ್ಧತಿ, ತೆರಿಗೆ ಪದ್ಧತಿ, ಅಳತೆಗಳು ಮತ್ತು ತೂಕಗಳ ವೃತ್ತಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಐದರಲ್ಲಿ** ಪ್ರಸ್ತುತ ಅಧ್ಯಯನದ ಕೊನೆಯ ಹಂತವೆನಿಸಿದ್ದು. ಸಮಾರೋಪ ಕುರಿತದ್ದಾಗಿದೆ. ಅನುಬಂಧದಲ್ಲಿ ನಕಾಶೆ, ಸಾಂಸ್ಕೃತಿಕ ಪದಕೋಶ, ಛಾಯಾಚಿತ್ರಗಳು ಹಾಗೂ ಆಕರ ಗ್ರಂಥಗಳನ್ನು ನೀಡಲಾಗಿದೆ.

# ಅಧ್ಯಾಯ ೨ ರಾಜಕೀಯ ಚರಿತ್ರೆ

## ಅಧ್ಯಾಯ-೨

## ರಟ್ಟರ ರಾಜಕೀಯ ಚರಿತ್ರೆ

### ೧ ರಟ್ಟರ ಪೂರ್ವ ಚರಿತ್ರೆ

### ಾತವಾಹನರು

ಕರ್ನಾಟಕದ ರಾಜಮನೆತನಗಳಲ್ಲಿ ಮೌರ್ಯರ ಆಳ್ವಿಕೆಯ ನಂತರದಲ್ಲಿ ಬೆಳಗಾವಿಯು ವೇಣು ಗ್ರಾಮ) ಶಾತವಾಹನರ ಆಳ್ವಿಕೆಗೆ ಒಳಪಟ್ಟಿತು. ಆ ನಂತರದಲ್ಲಿ ಪಲ್ಲವರು ತಮ್ಮ ಆಡಳಿತವನ್ನು ಈ ಜಿಲ್ಲೆಯ ಮೇಲೆ ನೆಡೆಸಿರುವ ಸಾಧ್ಯತೆಗಳು ಅಧಿಕವೆಂದು ಹೇಳಬಹುದಾಗಿದೆ. ಾತವಾಹನರು ಕರ್ನಾಟಕವನ್ನು ಕ್ರಿ.ಪೂ. ೨ನೇ ಶತಮಾನದಿಂದ ಕ್ರಿ.ಶ. ೨ನೇ ಶತಮಾನದವರೆಗೆ ಳಿದರು. ಈ ಅವಧಿಯಲ್ಲಿ ಅವರು ಅನೇಕ ಏಳುಬೀಳುಗಳನ್ನು ಕಂಡರು ಎಂಬುದು ನಮಗೆ ಳಿದುಬರುತ್ತದೆ. "ಮಳವಳ್ಳಿ ಮತ್ತು ಬನವಾಸಿ" ದಾನ ಶಾಸನಗಳಲ್ಲಿ ಹಾರೀತಿ ಪುತ್ರ ಾತಕರ್ಣಿಯ ಉಲ್ಲೇಖವಿದೆ. ಇವನು ನಂದರ ಮತ್ತು ಮೌರ್ಯರ ಕಾಲದಲ್ಲಿ ಕುಂತಳ ಾಂತದಲ್ಲಿ ಅವರ ಮಾಂಡಲೀಕನಾಗಿದ್ದಿರಬಹುದೆಂದು ಅಭಿಪ್ರಾಯವಿದೆ. ಕರ್ನಾಟಕದ ಕೆಲವು ಾಗಗಳು ಇವರ ಆಳ್ವಿಕೆಗೆ ಸೇರಿದ್ದವು. ಶಾತವಾಹನರು ಚಿನ್ನ, ಬೆಳ್ಳಿ, ಸೀಸ ಮತ್ತು ಪೊಟಿನ್ ಮಿಶ್ರಲೊಹ) ಗಳಲ್ಲಿ ನಾಣ್ಯಗಳನ್ನು ಟಂಕಿಸುತ್ತಿದ್ದರು. ಇವರ ನಾಣ್ಯಗಳು ಸಾಮಾನ್ಯವಾಗಿ ೃತ್ತಾಕಾರ, ಚೌಕಾಕಾರ ಹಾಗೂ ಆಯತಾಕಾರದಲ್ಲಿವೆ. ಈ ನಾಣ್ಯಗಳ ಮೇಲೆ ಆನೆ, ಸಿಂಹ, ುದುರೆ, ಉಜ್ಜಯಿನಿ ಚಿಹ್ನೆ ಮತ್ತು ಆ ಕಾಲದ ಬ್ರಾಹ್ಮೀಲಿಪಿಯ ರಾಜರ ಹೆಸರಿನ ಬರಹವಿರುತ್ತದೆ ವರ ದೊಡ್ಡನಾಣ್ಯ ಒಂದೂವರೆ ಅಂಗುಲ ಅಗಲವಿದ್ದರೆ ಸಣ್ಣನಾಣ್ಯಗಳು ಅರ್ಧ ಂಗುಲವಿರುತ್ತವೆ. ಕೆಲವು ನಾಣ್ಯಗಳು ೨೦ ಗ್ರಾಂ ತೂಗಿದರೆ ಕೆಲವು ೨ ಗ್ರಾಂ ತೂಗುತ್ತವೆ. ವರ ನಾಣ್ಯಗಳು ಸನ್ನತಿ, ಭೀಮನಹಳ್ಳಿ, ಹಿಪ್ಪರ್ಗಿ, ಹರದನಕೆರೆ, ಐಹೊಳೆ, ವಡಗಾಂ, ಟ್ಟದಕಲ್ಲು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಕುಂದೂರು, ಬನವಾಸಿ, ಚಂದ್ರವಳ್ಳಿ ಮುಂತಾದ ಳಗಳಲ್ಲಿ ಕಂಡುಬರುತ್ತವೆ. ಇದರಿಂದ ನಮಗೆ ತಿಳಿಯುವಂತ ವಿಷಯವೆಂದರೆ ಶಾತವಾಹನರು ಳಗಾವಿಯಲ್ಲಿ ಆಳ್ವಿಕೆಮಾಡಿರುವುದು ತಿಳಿದುಬರುತ್ತದೆ.

ತವಾಹನರ ಮೂಲದ ಬಗ್ಗೆ ತಿಳಿಯುವುದಾದರೆ ಇದರ ಬಗ್ಗೆ ವಿದ್ವಾಂಸರಲ್ಲೇ ನ್ನಾಭಿಪ್ರಾಯಗಳಿವೆ. ಮುಖ್ಯವಾಗಿ ನೋಡುವುದಾದರೆ ಪುರಾಣಗಳಲ್ಲಿ ಇವರನ್ನು 'ಆಂಧ್ರರು' ಂಧ್ರಭೃತ್ಯರು' ಎಂದು ವರ್ಣಿಸಲಾಗಿದೆ. ಶಾತವಾಹನರ ಅನೇಕ ಶಾಸನಗಳು ಆಂದ್ರದಲ್ಲಿ ೂರಕಿರುವುದು ಕಡಿಮೆಯೇ ಮತ್ತು ಶಾತವಾಹನರು ಕರ್ನಾಟಕದವರೆಂದು ಹೇಳಲು ಅನೇಕ

ಶಾಸನಗಳು ಕರ್ನಾಟಕದಲ್ಲಿ ದೊರೆತಿವೆ. ಶಾತವಾಹನರ ಅನೇಕ ಶಾಸನಗಳಲ್ಲಿ "ಕುಂತಲ ಸ್ವಾಮಿಗಳು" ಎಂದು ವರ್ಣಿಸಲಾಗಿದೆ. "ಕುಂತಲದೇಶವೆಂದರೆ" ಕರ್ನಾಟಕವೆ "ಪುರಾಣಗಳಲ್ಲಿಯು ಕೂಡ ಶಾತಕರ್ಣಿಯನ್ನು "ಕುಂತಲ ಶಾತಕರ್ಣಿ" ಎಂದು ವರ್ಣಿಸಿರುವುದು ಕಂಡುಬರುತ್ತದೆ.

ರಾಜನು ಆದರ್ಶವಾದ ಪದ್ಧತಿಯನ್ನು ಅನುಸರಿಸುತ್ತಿದ್ದನು. ತೆರಿಗೆಗಳನ್ನು ಹಣ ಮತ್ತು ಧಾನ್ಯದ ರೂಪದಲ್ಲಿ ಸಂಗ್ರಹಿಸುತ್ತಿದ್ದನು. ರೈತನು ಬೆಳೆದ ಬೆಳೆಯ ಆರನೇ ಒಂದು (೬/೧) ಭಾಗವನ್ನು ಕಂದಾಯವೆಂದು ಸಂಗ್ರಹಿಸುತ್ತಿದ್ದನು. ಆರಂಭದಲ್ಲಿ ವ್ಯಾಪಾರವು " ವಸ್ತು ವಿನಿಮಯ" ಪದ್ದತಿಯನ್ನು ಅನುಸರಿಸುತ್ತಿತ್ತು. ಉಪ್ಪು, ಮೀನು, ಭತ್ತ, ಹಾಲು, ಉತ್ಪನ್ನಗಳು, ಗೆಡ್ಡೆ ಗೆಣಸುಗಳು, ಜೇನು ತುಪ್ಪ ಮುಂತಾದವುಗಳು ಅವಶ್ಯಕ ವಸ್ತುಗಳಾಗಿದ್ದ ಕಾರಣ ಇವುಗಳು ಸಾಮಾನ್ಯವಾಗಿ "ವಸ್ತುವಿನಿಮಯ" ಪದ್ಧತಿಯಲ್ಲಿ ಕೈ ಬದಲಾಗುತ್ತಿದ್ದವು. ಉಪ್ಪನ್ನು ಭತ್ತದ ಬದಲಾಗಿ, ಭತ್ತವನ್ನು ಹಾಲಿನ ಬದಲಾಗಿ, ಬೆಣ್ಣೆಯನ್ನು ಮೊಸರು ತುಪ್ಪ ಜೇನಿನ ಬದಲಾಗಿ ವಿನಿಮಯ ಮಾಡಲಾಗುತ್ತಿತ್ತು. ಈಗೆ ಶಾತವಾಹನರು ತಮ್ಮ ತೆರಿಗೆ ಪದ್ಧತಿ ನೆಡೆಸುತಿದ್ದರೆಂಬುದು ತಿಳಿದುಬರುತ್ತದೆ.

**ಕದಂಬರು**

ಕದಂಬರ ಮೂಲದ ಬಗ್ಗೆ ಹಲವಾರು ಕಥೆಗಳಿವೆ "ತ್ರಿಲೋಚನ ಕದಂಬ" ಈ ವಂಶದ ಮೂಲ ಪುರುಷ ಅವನಿಗೆ ನಾಲ್ಕು ಕೈ ಮೂರು ಕಣ್ಣುಗಳಿದ್ದವು. ಶಿವನ ಬೆವರು ಕದಂಬ ವೃಕ್ಷದ ಕೆಳಗೆ ಬಿದ್ದು ಆತ ಹುಟ್ಟಿದ. ಆದ್ದರಿಂದಲೇ ಅವನ ವಂಶಸ್ಥರಿಗೆ ಕದಂಬರೆಂದು ಹೆಸರು ಬಂದಿತು. ಇದು ಒಂದು ಇತಿಹಾಸವಾದರೆ ಮಯೂರವರ್ಮನೇ ಕದಂಬ ವೃಕ್ಷದ ಕೆಳಗೆ ರುದ್ರನಮಗನಾಗಿ ಹುಟ್ಟಿದ . ಆದ್ದರಿಂದಲೇ ಆತನ ವಂಶಸ್ಥರಿಗೆ ಕದಂಬರೆಂದು ಮತ್ತೊಂದು ಹೇಳಿಕೆಯು ಇದೆ. ಮತ್ತು ಅವನಿಗೆ ಹಣೆಯ ಮೇಲೆ ಕಣ್ಣಿದ್ದರಿಂದ ಕಿರೀಟವನ್ನು ಮಂಡಿಯ ಮೇಲೆ ಕಟ್ಟಬೇಕಾಗಿತ್ತು. ಮತ್ತೊಂದು ಕಥೆಯ ಪ್ರಕಾರ ಪರುಶುರಾಮನು ಹೈಗ ಮತ್ತು ತುಳುನಾಡನ್ನು ಸಮುದ್ರದಿಂದ ಉದ್ದರಿಸಿದ ತಮ್ಮ ಶಿಷ್ಯನ ಸೃಷ್ಠಿ ಕಾರ್ಯವನ್ನು ನೋಡುವುದಕ್ಕಾಗಿ ಶಿವಪಾರ್ವತಿಯರು ಸದ್ಯೋಜಾತವಾದ ಈ ಪ್ರದೇಶಕ್ಕೆ ಬಂದಿಳಿದಾಗ ಅವರಿಗೆ ಕದಂಬ ವೃಕ್ಷದಡಿಯಲ್ಲಿ ಕುಮಾರನೊಬ್ಬನು ಜನಿಸಿದ ಅವನೇ ಮಯೂರವರ್ಮ. ಅವನ ವಂಶಕ್ಕೆ "ಕದಂಬ ಕುಲ" ಎಂದು ಹೆಸರಾಯಿತು. ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ಬನವಾಸಿಯ ಕದಂಬರು ನಾಲ್ಕನೇ ಶತಮಾನದಿಂದ ಸುಮಾರು ಮೂರು ಶತಮಾನಗಳ ಕಾಲ ಕರ್ನಾಟಕದ ವಾಯುವ್ಯ ಭಾಗವನ್ನು ಆಳಿದರು. ಮಾನವ್ಯಗೋತ್ರದ ಹಾರತಿ ವಂಶದ ಬ್ರಾಹ್ಮಣ ವೀರಶರ್ಮ ಎಂಬುವನು ಈ ವಂಶದ ಮೊದಲ ವ್ಯಕ್ತಿ. ಇವನ ಮಗ ಬಂದುಶೇಣ ಕ್ಷಾತ್ರ ವೃತ್ತಿಯನ್ನು ಅವಲಂಬಿಸಿದ್ದ ಎಂಬ ಅಂಶವನ್ನು ಇತ್ತೀಚೆಗೆ ದೊರೆತ ಬನವಾಸಿಯ ಹತ್ತಿರವಿರುವ ಗುಡ್ನಾಪುರದ ಶಾಸನವು ತಿಳಿಸುತ್ತದೆ. ಇದೇ ಶಾಸನ ಬಂದುಶೇಣನ ಮಗ ಮಯೂರಶರ್ಮ ಎಂದು ಬ್ರಾಹ್ಮಣ್ಯವನ್ನು ಪಾಲಿಸುತ್ತಿದ್ದನೆಂದು ತಿಳಿಸುತ್ತದೆ. ತಾಳಗುಂದದಲ್ಲಿರುವ ಶಾಂತಿವರ್ಮನ ಶಾಸನ ಕದಂಬ ವಂಶದ ಸ್ಥಾಪನೆಯ ಬಗ್ಗೆ ಹೆಚ್ಚು ಮಾಹಿತಿಯನ್ನು ಕೊಡುತ್ತದೆ . ಅದರ ಪ್ರಕಾರ ಬ್ರಾಹ್ಮಣರಾದ ಈ ವಂಶಜರ ಮನೆಯ ಬಳಿ ಕದಂಬ ವೃಕ್ಷವೊಂದು ಇದ್ದುದರಿಂದ ಈ ಮನೆಯವರಿಗೆ ಕದಂಬ ಎಂಬ ಹೆಸರು ಪ್ರಾಪ್ತವಾಯಿತು. ಈ ಮಯೂರಶರ್ಮನೇ ಕದಂಬ ರಾಜ್ಯ ಸ್ಥಾಪಕ. ಈತ ವೇದ ಅಧ್ಯಯನಕ್ಕಾಗಿ ತನ್ನ ತಾತ ವೀರಶರ್ಮನೊಡನೆ ಕಂಚಿಯ ಘಟಿಕಸ್ಥಾನಕ್ಕೆ ಹೋಗಿದ್ದ ಅಲ್ಲಿಯ ಪಲ್ಲವ ಅರಸು ಅಶ್ವಮೇದಯಾಗ ಮಾಡುವಾಗ ಇವನು ಪಲ್ಲವ ಸೈನಿಕರಿಂದ ಅವಮಾನಿತನಾದ ಇದರಿಂದ ಛಲಹಿಡಿದು ಅಸ್ತ್ರ ವಿದ್ಯೆ ಕಲಿತು ದಂಡುಕಟ್ಟಿ ಅವರ ವಿರುದ್ದ ಹೋರಾಡಿದ. ಪಲ್ಲವರ ಗಡಿಪ್ರದೇಶವಾದ ಶ್ರೀಪರ್ವತದ ಭಾಗವನ್ನು ಆಕ್ರಮಿಸಿದ. ಪಲ್ಲವರ ಸಾಮಂತನಾದ ಬೃಹದ್ಬಾಣರನ್ನು ಸೋಲಿಸಿ ಅವನಿಂದ ಕಪ್ಪವನ್ನು ವಸೂಲಿ ಮಾಡಿದ, ಮುಗ್ಗಲಮುಳ್ಳಾಗಿದ್ದ ಮಯೂರಶರ್ಮನೊಂದಿಗೆ ವಿರೋಧ ಬೆಳೆಸಲು ಪಲ್ಲವರು ಇಚ್ಚಿಸಲಿಲ್ಲ ಇವನಿಗೆ ಅವರು ಪ್ರೇಹರಾ ನದಿ ಪ್ರದೇಶವನ್ನು ಬಿಟ್ಟುಕೊಟ್ಟರು. ಮಯೂರಶರ್ಮ ಕದಂಬರ ಮೊದಲ ಅರಸ ಇವನೇ ಈ ವಂಶದ ಮೂಲಸ್ಥಾಪಕನೆಂದು ಗಮನಿಸಬೇಕಾಗುತ್ತದೆ. ಇವನು ಪಲ್ಲವರ ಸಾಮಂತನಾಗಿ ಆಳ್ವಿಕೆಯನ್ನು ಆರಂಭಿಸಿದರೂ ಸ್ವಲ್ಪಕಾಲದಲ್ಲೆ ಸ್ವಾತಂತ್ರ್ಯವನ್ನು ಘೋಷಿಸಿಕೊಂಡ ಎಂಬುದು ಆಡಳಿತದ ಬಗ್ಗೆ ವಿವೇಚನೆ ಮಾಡಿದಾಗ ನಮಗೆ ತಿಳಿಯುತ್ತದೆ. ಮಯೂರಶರ್ಮನು ಚಂದ್ರವಳ್ಳಿಯ ಶಾಸನದ ಪ್ರಕಾರ ಉತ್ತರದಲ್ಲಿರುವ ಶಕಸ್ಥಾನ ಪಾರಿಯಾತ್ರಿ ಮೌಖರಿ ದಕ್ಷಿಣದಲ್ಲಿರುವ ಸೇಂದ್ರಕ, ಪುನ್ನಾಟ, ಪಲ್ಲವ ಹಾಗೂ ಪಶ್ಚಿಮದಲ್ಲಿರುವ ತ್ರಿಕೂಟ ಮತ್ತು ಅಭೀರರನ್ನು ಗೆದ್ದನೆಂದು ಹೇಳಲಾಗಿದೆ. ಇತ್ತೀಚೆಗೆ ಶಾಸನದ ಪಾಠವನ್ನು ಬೇರೆ ರೀತಿಯಲ್ಲಿ ಓದಿ ಅರ್ಥೈಸಲಾಗಿದೆ. ಇದರ ಪ್ರಕಾರ ಮಯೂರಶರ್ಮ ಮೇಲೆ ತಿಳಿಸಿರುವ ಪ್ರದೇಶವನ್ನು ಗೆದ್ದ ವಿಚಾರವೇ ಇಲ್ಲವೆಂಬುದು ಗಮನಿಸಬೇಕಾದ ಅಂಶವಾಗಿದೆ. ಈ ಸಂಶೋಧನೆಯ ಬೆಳಕಿನಲ್ಲಿ ಹಳೆಯ ಹೇಳಿಕೆಯನ್ನು ಮಾರ್ಪಾಡು ಮಾಡುವುದು ಅಗತ್ಯವೆನಿಸುತ್ತದೆ. ಶಿವಮೊಗ್ಗ ಜಿಲ್ಲೆಯ ಮಳವಳ್ಳಿಯಲ್ಲಿ ದೊರಕಿರುವ ಪ್ರಾಕೃತ ಶಾಸನವೊಂದರಲ್ಲಿ ಚುಟುಕುಲದ ಅರಸನು ದತ್ತಿ

ನೀಡಿರುವ ಉಲ್ಲೇಖವಿದೆ. ಅದೇ ಶಾಸನದಲ್ಲಿ ಶಿವಸ್ಕಂದವರ್ಮನು ಹಿಂದೆ ಮಳವಳ್ಳಿ ದೇವರಿಗೆ ದತ್ತಿ ಕೊಟ್ಟಿರುವುದನ್ನು ತಿಳಿಸಲಾಗಿದೆ. ಇದನ್ನು ಕದಂಬ ರಾಜನು ಜೀರ್ಣೋದ್ಧಾರ ಮಾಡಿಸಿದನೆಂದು ಹೇಳಿದೆ. ಈ ಕದಂಬ ರಾಜನು ಮಯೂರಶರ್ಮನೆಂದು ಅನೇಕರು ಅಭಿಪ್ರಾಯಪಡುವುದಾದರು ಇದರಲ್ಲಿ ಅನುಮಾನಕ್ಕೆಡೆ ಉಂಟು ಇವನ ನಂತರ ಅಧಿಕಾರಕ್ಕೆ ಬಂದ ಕದಂಬ ರಾಜರು ಕ್ಷಾತ್ರವೃತ್ತಿಯನ್ನು ಅನುಸರಿಸಿ "ವರ್ಮ" ಎಂದು ಕರೆದುಕೊಂಡರು. ಅನಂತರದ ಶಾಸನಗಳು ಇವನನ್ನು ಮಯೂರವರ್ಮ ಎಂದು ಕರೆದಿದೆ. ಕದಂಬರ ಆಡಳಿತದಲ್ಲಿ ಕಂಗವರ್ಮ ಭಗೀರಥ ಮತ್ತು ರಘು ಕಾಕುಸ್ಥವರ್ಮ, ಶಾಂತಿವರ್ಮ, ರವಿವರ್ಮ, ಹರಿವರ್ಮ ಮುಂತಾದವರು ಕದಂಬರ ವಂಶದಲ್ಲಿ ಬನವಾಸಿಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆಯನ್ನು ಮಾಡಿದರು.

ಕದಂಬರ ಆಡಳಿತದಲ್ಲಿ ನೋಡುವುದಾದರೆ, ನಾಡಿನ ಆರ್ಥಿಕ ಸ್ಥಿತಿಯು ಭದ್ರವಾದ ನೆಲೆಗಟ್ಟಿನ ಮೇಲೆ ರೂಪಿತವಾಗಿತ್ತು. ಕೃಷಿಯು ದೇಶದ ಮುಖ್ಯ ಹಣಕಾಸಿನ ಮೂಲವಾಗಿತ್ತು. ಭೂಮಿಯೂ ಜನತೆಯ ಬೆಲೆಯ ಸ್ಥಿತ ಆಸ್ತಿಯಾಗಿತ್ತು. ವ್ಯವಸಾಯದ ಅಭಿವೃದ್ಧಿಗೆ ಸರ್ಕಾರದ ಉತ್ತೇಜನ ಇರುತಿತ್ತು. ಚಂದ್ರವಳ್ಳಿಯ ಶಾಸನಗಳಲ್ಲಿ ಮಯೂರವರ್ಮ ಕೆರೆಕಟ್ಟಿಸಿದ ಪ್ರಸ್ತಾಪವಿದೆ. ಇದರಿಂದ ನಮಗೆ ತಿಳಿಯುತ್ತದೆ ಕೃಷಿಗೆ ಯೋಗ್ಯವಾದ ಸಲಕರಣೆಗಳನ್ನು ಒದಗಿಸಬಲ್ಲ ಉತ್ತಮ ಆಡಳಿತಗಾರನೆಂದು. ರವಿವರ್ಮ ಮತ್ತು ಕಾಕುಸ್ಥವರ್ಮರು ಕೆರೆ, ತಟಾಕವನ್ನು ಕಟ್ಟಿಸಿ ವ್ಯವಸಾಯಕ್ಕೆ ನೆರವಾದರು. ಪಶುಪಾಲನೆ, ನೇಯ್ಗೆ, ಮುಂತಾದ ಕಸುಬುಗಳು ಈ ಕಾಲದಲ್ಲಿ ಜನಪ್ರಿಯವಾಗಿದ್ದವು. ಕದಂಬರು ವ್ಯಾಪರಕ್ಕೂ ಅಷ್ಟೇ ಪ್ರೋತ್ಸಾಹ ನೀಡಿರಬೇಕು ಆದರೆ ಇದಕ್ಕೆ ಆಧಾರ ಸಿಗದು. ಶಾಸನದಲ್ಲಿ ನದಿಯೊಂದಕ್ಕೆ ಸೇತುವೆ ನಿರ್ಮಿಸಿದ ವಿಷಯವಿದೆ ರಾಜರು ನಾಣ್ಯಗಳನ್ನು ಹೊರಡಿಸುತ್ತಿದ್ದುದು ವ್ಯಾಪಾರ ಸುಗಮವಾಗಿ ನಡೆಯಲು ಸಹಾಯಕವಾಗಿತ್ತು. ಕದಂಬರ ಕಾಲದಲ್ಲಿ ಅನೇಕ ಧರ್ಮಗಳು ಪ್ರಚಲಿತವಾಗಿದ್ದವು ಬೌದ್ಧಧರ್ಮ ಇವರ ಕಾಲದಲ್ಲಿ ಯಥಾಸ್ಥಿತಿ ಮುಂದುವರೆಯಿತು. ಬೌದ್ಧಧರ್ಮಕ್ಕೆ ದಾನ ನೀಡಿದ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಮತ್ತು ಕಾಕುಸ್ಥವರ್ಮನ ಹಲ್ಮಿಡಿ ಶಾಸನದಲ್ಲಿ ಉಲ್ಲೇಖವಿರುವಂತೆ ಇದೊಂದು ದಾನ ಶಾಸನ ಕೆಕೆಪಲ್ಲವರೊಡನೆ ಹೋರಾಡಿ ಗೆದ್ದಿದ್ದರ ಪರಿಣಾಮವಾಗಿ ಬಾಳ್ಗಚ್ಚಾಗಿ ದಾನಮಾಡಿದ ಉಲ್ಲೇಖಗಳು ಕಂಡುಬರುತ್ತವೆ. ಮತ್ತು ಕುರುಮಿಡಿ ಎಂಬ ಕುರುಬರಿಗೆ ಬಿಟ್ಟ ತೆರಿಗೆ ಎಂದು ಈ ಶಾಸನದಲ್ಲಿ ನೋಡಬಹುದು. ಚಂದ್ರವಳ್ಳಿ ಶಾಸನವು ಮಯೂರಶರ್ಮನು ಸುಂದರ ಮತ್ತು ದೃಢವಾದ ಕೆರೆಯನ್ನು ಕಟ್ಟಿಸಿದ ಮತ್ತು ಕಾಡಿನಲ್ಲಿ ಸೈನ್ಯತಾಣವನ್ನು ಸ್ಥಾಪಿಸಿದ ಎಂದು

ತಿಳಿಯುತ್ತದೆ. ಈ ಶಾಸನದ ಪಾಠ ಮತ್ತು ಅರ್ಥದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇದೊಂದು ಪ್ರಾಕೃತ ಶಾಸನವೆಂದು ಶ್ರೀ ಎಂ.ಹೆಚ್. ಕೃಷ್ಣ ಅವರು ತಿಳಿಸಿದ್ದು ಇನ್ನೂ ಅನೇಕ ವಿದ್ವಾಂಸರು ಇದನ್ನು ಮರುಪರಿಶೀಲಿಸಿ ಬೇರೆ ಬೇರೆ ಅಭಿಪ್ರಾಯವನ್ನು ತಿಳಿಸಿದ್ದಾರೆ. ಇತ್ತೀಚೆಗೆ ಡಾ.ಬಿ. ರಾಜಶೇಖಪ್ಪನವರು ಈ ಶಾಸನವನ್ನು ಮಯೂರಶರ್ಮ ಎನ್ನದೆ ಮಯೂರವರ್ಮ ಎನ್ನಲಾಗಿದೆ ಎಂದು ಸ್ಪಷ್ಟಪಡಿಸಿದ್ದಾರೆ. ಚಂದ್ರವಳ್ಳಿಯ ಹುಲಿಗೊಂದಿ ಭೈರವೇಶ್ವರ ದೇವಾಲಯದ ಮುಂದಿರುವ ಈ ಶಾಸನವನ್ನು ದಾಕ್ಷಿಣಾತ್ಯ ಬ್ರಾಹ್ಮೀಲಿಪಿಯಲ್ಲಿ ಕೊರೆಯಲಾಗಿದೆ ಚಂದ್ರವಳ್ಳಿಯ ಭಾಗದ ಕಾಡಿನಲ್ಲಿ ವಾಸಿಸಲು ನೆಲೆಯನ್ನು ಮಾಡಿಕೊಂಡಿದ್ದು ಮತ್ತು ಜನರ ಉಪಯೋಗಕ್ಕೆ ಅನುಕೂಲವಾಗಲೆಂದು ಕೆರೆಯನ್ನು ದುರಸ್ಥಿಗೊಳಿಸಲಾಗಿದೆ. ರಾಜ್ಯಸ್ಥಾಪನೆಗೆ ಅಗತ್ಯವಾದ ಸಿದ್ದತೆಗಳನ್ನು ಮಾಡಿಕೊಳ್ಳಲು ಈ ಪ್ರಾಂತ್ಯವನ್ನು ಆರಿಸಿಕೊಂಡರೆಂದು ಸ್ಪಷ್ಟವಾಗುತ್ತದೆ. ತಾಳಗುಂದ ಶಾಸನದಲ್ಲಿ ಉಲ್ಲೇಖಗೊಂಡಿರುವ ಶ್ರೀ ಪರ್ವತ ಚಂದ್ರವಳ್ಳಿಯ ಸಮೀಪದ ಧವಳಪ್ಪಗುಡ್ಡ ಎಂದು ಗುಡ್ಡದ ಮೇಲೆ ಸಿಗುವ ಪಳೆಯುಳಿಕೆಗಳಿಂದ ಗುರುತಿಸಬಹುದಾಗಿದೆ.

**ಬಾದಾಮಿಯ ಚಾಳುಕ್ಯರು**

ಬಾದಾಮಿಯ ಚಾಲುಕ್ಯರ ಪುಲಿಕೇಶಿಯ ಉತ್ತರಾಧಿಕಾರಿಯಾಗಿ ಬಂದವನು ಒಂದನೆಯ ವಿಕ್ರಮಾದಿತ್ಯ. (ಕ್ರಿ.ಶ. ೬೫೫-೬೮೧) ಈತ ಪಲ್ಲವರನ್ನು ಸೋಲಿಸಿ ಕಳೆದುಕೊಂಡಿದ್ದ ಪ್ರದೇಶವನ್ನು ಮತ್ತೆ ಗಳಿಸಿದನು. ಇದರ ಬಗ್ಗೆ ಬೇವಿನಹಳ್ಳಿ ಶಾಸನವು ಚಾಲುಕ್ಯರ ವಂಶಾವಳಿಯನ್ನು ನೀಡಿದೆ.

ಕ್ರಿ.ಶ. ೯೭೦ರ ಗಂಜಿಗಟ್ಟಿ ಶಾಸನವು ಸಾಂಪ್ರದಾಯಿಕ ವಿವರಗಳನ್ನು ಬಿಟ್ಟು ನೇರವಾಗಿ ಚಂದಿಯಮ್ಮರಸ ದೇವರಿಗೆ ಭೂಮಿಯನ್ನು ಬಿಟ್ಟನು ಎಂದು ತಿಳಿಸುತ್ತಾರೆ. ಸುವ್ಗಿಲ್ನಾಡು, ಪಿಟ್ಟಗೆರೆ ಪನ್ನೆರಡು ಗಾವೂಂಡ ದೃಷ್ಟಿಯಿಂದ ಈ ಶಾಸನವನ್ನು ಬಾದಾಮಿ ಚಾಲುಕ್ಯರ ಕಾಲದಲ್ಲಿ ಸೇರಿಸಲಾಗಿದೆ. "ಡಾ. ಬಿ. ರಾಜಶೇಖರಪ್ಪ ಇತಿಹಾಸ ಕಥನದಲ್ಲಿ" ಇದೊಂದು ದಾನ ಶಾಸನವಾಗಿದ್ದು ದಾನವನ್ನು ಸ್ವೀಕರಿಸಿದವರು ಕಾವಳಿಗ ಭಟಾರರು, ಕಾಪಾಲಿಕ ಸ್ವಾಮಿಗಳು ಎಂದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ಕೌಳರು ಅಥವಾ ಕಾಪಾಲಿಕರ ಚಟುವಟಿಕೆಯ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ. ಬಾದಾಮಿ ಚಾಲುಕ್ಯರ ಮಾಂಡಲಿಕರಾಗಿ ಆಡಳಿತ

ನಡೆಸಿದ್ದ ರಾಷ್ಟ್ರಕೂಟರು ಪ್ರಬಲರಾಗಿ ಮೊದಲು ಬಾದಾಮಿಯ ಚಾಲುಕ್ಯರನ್ನು ಸೋಲಿಸಿ ಕ್ರಮೇಣ ದಕ್ಷಿಣ ಭಾರತದ ಬಹಳಷ್ಟು ಪ್ರದೇಶಗಳನ್ನು ಆಕ್ರಮಿಸಿಕೊಂಡರು.

ಚಾಲುಕ್ಯರ ಇತಿಹಾಸವನ್ನು ನೋಡುವುದಾದರೆ ಬಹುಮುಖ್ಯವಾಗಿ ಅವರ ಅರ್ಥವ್ಯವಸ್ಥೆಯು ಮುಖ್ಯವಾಗಿ ಕಂಡುಬರುತ್ತದೆ. ಇಲ್ಲಿ ಚಾಲುಕ್ಯರ ಕಾಲದಲ್ಲಿ ಭೂಮಿಯ ಒಡೆಯ ರಾಜನು ಅಥವಾ ಅದಕ್ಕೆ ಸಂಬಂಧಿಸಿದ ವ್ಯಕ್ತಿಯೊ ಎಂಬುದು ಸ್ಪಷ್ಟವಿಲ್ಲ. ರಾಜ್ಯ ರಾಜನದು ಅದರೊಳಗಿನ ಎಲ್ಲಾ ಭೂಮಿಯು ರಾಜನ ಒಡೆತನಕ್ಕೆ ಸೇರಿದ್ದೆಂದೂ ಕೆಲವರ ಅಭಿಪ್ರಾಯ. ಏಕೆಂದರೆ ಇಡಿ ಹಳ್ಳಿಯನ್ನೇ ರಾಜನು ದಾನ ಮಾಡಿರುವುದನ್ನು ಶಾಸನಗಳಲ್ಲಿ ಕಾಣುತ್ತೆವೆ.

ಚಳುಕ್ಯರ ಬಹುಪಾಲು ಶಾಸನಗಳು "ಬ್ರಹ್ಮದೇಯಾ" ದಾನಗಳನ್ನು ಕುರಿತು ಇವೆ. ಬ್ರಾಹ್ಮಣರಿಗೆ ಕೊಡಲಾದ ದತ್ತಿಗಳನ್ನು ಬ್ರಹ್ಮದೇಯಾಗಳೆನ್ನುತ್ತಾರೆ. ಹೀಗೆ ಕೊಡಲಾದ ಭೂದಾನಗಳು ಗ್ರಾಮದ ಶೈಕ್ಷಣಿಕ, ಧಾರ್ಮಿಕ ಬೆಳವಣಿಗೆಗೆ ಮುಖ್ಯ ಸಾಧನಗಳಾಗಿದ್ದವು. ದಾನವಾಗಿ ಪಡೆದ ಭೂಮಿಗೆ ತೆರಿಗೆ ವಿನಾಯಿತಿ ಇರುವುದು ರೂಢಿಯಾಗಿತ್ತು. ಇಮ್ಮಡಿ ಪುಲಕೇಶಿಯ ಹೈದ್ರಾಬಾದ ಮತ್ತು ಪೆದ್ದವಡಗೂರು ಶಾಸನಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ. ಚಾಳುಕ್ಯರ ಶಾಸನಗಳಲ್ಲಿ ನಾಲ್ಕು ಬಗೆಯ ಭೂ ವಿಧಗಳನ್ನು ಗಮನಿಸಬಹುದು. ೧ ಗದ್ದೆ (ಹಸಿನೆಲ), ೨ ಬೆದ್ದಲೆ (ಒಣನೆಲ), ೩ ತೋಟದ ನೆಲ, ೪ ಬರಡು ನೆಲ. ವಿಜಯಾದಿತ್ಯನ ಬೆಟಪಳ್ಳಿ ಶಾಸನದಲ್ಲಿ ಈ ವಿಧಗಳನ್ನು ಕಾಣಬಹುದು. ಅಲ್ಲಿ ಕೊಡಲಾದ ಭೂದಾನವು ೨೫ ಮತ್ತರ ಕಪ್ಪು ಮಣ್ಣು, ೫೦ ಮತ್ತರ ಕೆಂಪು ಮಣ್ಣು, ೩೬ ಮಡಿ ಕಾಡನ್ನು ೧ ಮತ್ತರ (ಹಸಿನೆಲ) ಮತ್ತು ೨ ಮತ್ತರ ತೋಟವನ್ನು ಒಳಗೊಂಡಿದೆ. ಇಲ್ಲಿ ಮಣ್ಣಿನ ಗುಣ ನೀರಾವರಿ ಸೌಲಭ್ಯ ಹಾಗೂ ಬೆಳೆಯ ಆಧಾರದ ಮೇಲೆ ಭೂಪ್ರಕಾರಗಳನ್ನು ವಿಂಗಡಿಸಿದುದು ಇದರಿಂದ ತಿಳಿಯುತ್ತದೆ. ೨೬ ಮಡಿ ಕಾಡನ್ನು ನೀಡಿದುದು, ಕೃಷಿ ವಿಸ್ತರಣಾ ನೀತಿಯನ್ನು ಸೂಚಿಸುತ್ತದೆ. ಗದ್ದೆಯನ್ನು ಮಾತ್ರ ಕೇವಲ ೧ ಮತ್ತರ ನೀಡಿದುದು, ಅದು ಹೆಚ್ಚು ಬೆಲೆಬಾಳುವ ವಸ್ತುವಾಗಿತ್ತೆಂಬುದನ್ನು ಸೂಚಿಸುತ್ತದೆ. ಹಸಿ ನೆಲದ ಪ್ರಯೋಜನವನ್ನು ಅವರು ಚನ್ನಾಗಿ ಬಲ್ಲವರಾಗಿದ್ದರು. "ಇಮ್ಮಡಿ ಕೀರ್ತಿವರ್ಮನ" ಆಡೂರು ಶಾಸನದಲ್ಲಿ ಗದ್ದೆಯ ಪ್ರಸ್ತಾಪವಿದೆ. ಮೊದಲನೆಯ ವಿಕ್ರಮಾದಿತ್ಯನ ಶಾಸನವೊಂದರಲ್ಲಿ ವ್ರೀಹಿ ಕ್ಷೇತ್ರದ ದಾನವನ್ನು ಉಲ್ಲೇಖಿಸಲಾಗಿದೆ. ವ್ರೀಹಿ ಎಂದರೆ ನೆಲ್ಲು. ವ್ರೀಹಿ ಕ್ಷೇತ್ರವು ಹಸಿ ನೆಲವೇ ಆಗಿರುತ್ತದೆ. ಪೆದ್ದವಡಗೂರು ಶಾಸನದಲ್ಲಿ

೧೨ ಮತ್ತರ ಹಸಿ ನೆಲವನ್ನು ಶಾಸನ ಬರೆದ ಮಹೇಂದ್ರಪಲ್ಲವಾಚರಿಗೆ ದಾನ ನೀಡಿದುದು ದಾಖಲಾಗಿದೆ.

ಮೊದಲನೆಯ ವಿಕ್ರಮಾಧಿತ್ಯನ ಶಾಸನವೊಂದು ಆತನು ರತ್ನಗಿರಿಯಲ್ಲಿ ೧೨೦ ನಿವರ್ತನ ವೆದ್ದಲೆ ಭೂಮಿಯನ್ನು ದಾನಮಾಡಿದನ್ನು ಉಲ್ಲೇಖಿಸಿದೆ. ಶಾಸನಗಳಲ್ಲಿ ಕಾಣಿಸಿಕೊಳ್ಳುವ ಕರಿನೆಲವನ್ನು ಒಣ ಭೂಮಿ ಎಂದು ಗುರ್ತಿಸಬಹುದು. ಮತ್ತೊಂದು ಶಾಸನದಲ್ಲಿ ಹೂವಿನ ತೋಟವನ್ನು "ಹೂವಿನ ಗದ್ದೆ" ಎಂದೂ ಮಾವಿನ ತೋಟವನ್ನು "ಮಾವಿನ ಗದ್ದೆ" ಎಂದು ಕರೆಯಲಾಗಿದೆ.

ಗ್ರಾಮೀಣ ಆರ್ಥಿಕ ಜೀವನದಲ್ಲಿ ಕೃಷಿಯು ಮುಖ್ಯವಾದ ಘಟಕ. ಕೃಷಿಗೆ ಭೂಮಿಯಷ್ಟೇ ನೀರೂ ಅವಶ್ಯಕವಾಗಿದ್ದರಿಂದ ರಾಜರು ಕೆರೆ, ಬಾವಿಗಳನ್ನು ಕಟ್ಟಿಸಲೂ ಮುಂದಾದರು. ಕಂದಂಬ ಮಯೂರ ವರ್ಮನ ಚಂದ್ರವಳ್ಳಿ ಶಾಸನದಲ್ಲಿ ಮತ್ತು ಕಾಕುತ್ಸವರ್ಮನ ತಾಳಗುಂದ ಶಾಸನದಲ್ಲಿ ಕೆರೆ ನಿರ್ಮಾಣದ ಪ್ರಸ್ತಾಪವಿರುವುದನ್ನು ನೋಡಿದ್ದೇವೆ. ಅದೇ ರೀತಿ ಚಾಳುಕ್ಯರು ಸಹ ಹೆಚ್ಚಿನ ಕೆರೆಗಳನ್ನು ಕಟ್ಟಿಸಿರುವುದನ್ನು ನಾವು ನೋಡಬಹುದು. ಮೊದಲನೆಯ ಪುಲಕೇಶಿಯ "ಆಲ್ತೆಂ ಶಾಸನ"ದಲ್ಲಿ ನಾಲ್ಕಾರು ತಟಾಕಗಳ ಉಲ್ಲೇಖವಿದೆ. ಚಾಲುಕ್ಯರ ಕಾಲದ ಕೃಷಿ ಉತ್ಪನ್ನಗಳನ್ನು ತಿಳಿಯುವುದಾದರೆ ಶಾಸನಗಳು ಆಧಾರವಾಗಿವೆ. ಇವರು ಜೋಳ, ರಾಗಿ, ಗೋಧಿ ಮೊದಲಾದ ಧಾನ್ಯಗಳು ಮತ್ತು ಮಾವು, ಹಲಸು, ಹುಣಸೆ, ದಾಳಿಂಬೆ ಮುಂತಾದವುಗಳನ್ನು ಬೆಳೆಯುತ್ತಿದ್ದದು ಕಂಡುಬರುತ್ತದೆ.

ಚಾಳುಕ್ಯರ ಕಾಲದಲ್ಲಿ ಭೂಮಿಯನ್ನು ನಿವರ್ತನ ಎಂಬ ಮಾನದಿಂದ ಅಳೆಯಲಾಗುತ್ತಿತ್ತು. ಸಂಸ್ಕೃತ ಶಾಸನಗಳಲ್ಲಿ ನಿವರ್ತನವು ಕಾಣಿಸಿಕೊಂಡರೆ, ಕನ್ನಡ ಶಾಸನಗಳಲ್ಲಿ "ಮತ್ತರ್" ಎಂದು ತಿಳಿಯಬಹುದು. ನಿವರ್ತನ ಅಥವಾ 'ಮತ್ತರ್'ಗೆ ಸಮನಾದ ಆಧುನಿಕ ಅಳತೆಗಳನ್ನು ಕಂಡುಹಿಡಿಯುವಲ್ಲಿ ವಿದ್ವಾಂಸರು ಈಗಲೂ ಸಂಶೋಧನಾ ಹಾದಿಯಲ್ಲಿದ್ದಾರೆ. ಒಂದು ನಿವರ್ತನವು ಇಂದಿನ ಐದು ಎಕರೆಗಳ ವಿಸ್ತೀರ್ಣವನ್ನು ಹೊಂದಿದೆ ಎಂಬ 'ಎ.ಎಸ್.ಅಳ್ತೇಕರ' ಅಭಿಪ್ರಾಯವನ್ನು ಸದ್ಯಕ್ಕೆ ಒಪ್ಪಲಾಗಿದೆ.

ಕೆಲವು ಶಾಸನಗಳಲ್ಲಿ ಪನ್ನಾಸ, ಪನ್ನಾವೀಸಾ ಮತ್ತು ವೀಸಾ ಅಳೆತೆಗಳೂ ಬಳಕೆಯಾಗಿವೆ. ಇಮ್ಮಡಿ ಪುಲಕೇಶಿಯ "ತಮ್ಮೆಯನೂರು ಶಾಸನದಲ್ಲಿ ಪನ್ನಾಸ ಪದದ ಪ್ರಯೋಗವನ್ನು ಕಾಣುತ್ತೇವೆ. ಮಂಗಳೇಶನ ಬಾದಾಮಿ ಶಾಸನದಲ್ಲಿ ಮಾಲಕಾರರಿಗೆ ಅರ್ಧವಿಸ ನೀಡಿದುದನ್ನು

ಹೇಳಿದೆ. ಐಹೊಳೆಯ ದುರ್ಗ ಗುಡಿಯ ಶಾಸನದಲ್ಲಿ ಮಣ, ಪೇರು, ವೀಸಾ, ಭಂಡ ಪೇರುಗಳ ಪ್ರಸ್ತಾಪವಿದೆ. ಸಲಗೆ, ಕುಳ, ಕೊಳಗ, ಖಂಡುಗ, ಮಡಿ, ಸೊಂತಿಗೆ, ಎಂಬ ಮಾನಗಳು ಕಾಣಿಸಿಕೊಳ್ಳುತ್ತವೆ. ಮಣ ಎಂಬುದು ಈಗಿನ ಕಾಲದ ಮಣ(=೧೧.೨ ಕೆ.ಜಿ.) ಪೇರು ಎಂಬುವುದು ೬೪೪ ಸೇರುಗಳುಳ್ಳ ಚೀಲ. ವೀಸ (ವೀಸೆ) ಐದು ಸೇರುಗಳಿಗೆ ಸಮವಾದುದು. ವೀಸೆ ಇಲ್ಲಿ ತೂಕದ ಮಾನ, ವೀಸಾ ಎಂಬುದು ಹಣದ ಮಾನವಾಗಿತ್ತು. ೨೦೦ವೀಸೆಗಳು ಒಂದು ಗದ್ಯಾಣಕ್ಕೆ ಸಮ. ವೀಸವನ್ನು ವಿಸ್ತೀರ್ಣದ ಮಾನವೆಂದು ವೀಸೆಯನ್ನು ತೂಕದ ಮಾನವೆಂದು ವೀಸವನ್ನು ಹಣದ ಮಾನವೆಂದು ಬಳಸಿದಂತೆ ಕಾಣುತ್ತದೆ. ಭಂಡಪೇರು ಒಂದು ಬಂಡಿಯ ಹೊರೆಗೆ ಸಮವಾದುದು. ಕುಳ, (ಕುಳಗ) ಅಥವಾ ಕೊಳಗ ೬೪ ಸೇರುಗಳಿಗೆ ಸರಿಯಾದುದು. ಸೊಂತಿಗೆ ಎಂಬುದು ದ್ರವದ ಮಾಪನವಾಗಿತ್ತು.

ಚಾಳುಕ್ಯರ ಆಳ್ವಿಕೆಯ ಕಾಲದ ದಾನ ಶಾಸನಗಳನ್ನು ಅವಲೋಕಿಸಿದರೆ ಆ ಕಾಲದಲ್ಲಿ ಪ್ರಚಲಿತವಿದ್ದ ತೆರಿಗೆ ಸುಂಕಗಳ ಬಗ್ಗೆ ವಿವರಗಳು ಲಭ್ಯ ವಾಗುತ್ತವೆ ಭೂ ಕಂದಾಯದ ಜೊತೆಗೆ ಆಸ್ತಿ ತೆರಿಗೆ, ವೃತ್ತಿ ತೆರಿಗೆ, ವಾಣಿಜ್ಯ ತೆರಿಗೆ, ಸಾಮಾಜಿಕ ತೆರಿಗೆ, ಮೊದಲಾದವುಗಳು ಅಸ್ತಿತ್ವದಲ್ಲಿ ಇದ್ದುದನ್ನು ಮನಗಾಣುತ್ತೇವೆ. ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿಗಳಿದ್ದದ್ದು ಶಾಸನಗಳಿಂದ ಸ್ಪಷ್ಟವಾಗಿದೆ. ಇಮ್ಮಡಿ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ರೇವಡಿ ಎಂಬಾತನು ಒಡ್ಡರಾವುಳ, ಒಡ್ಡರಾವುಳ ತೆರಿಗೆಗೆ ಸಂಬಂಧಿಸಿದ ಅಧಿಕಾ ಯಾಗಿದ್ದು ಐಹೊಳೆಯ ದುರ್ಗದಗುಡಿ ಶಾಸನದಿಂದ ತಿಳಿದುಬರುತ್ತದೆ.

ಸ್ವಂತ ಮನೆಯುಳ್ಳವರು ಮತ್ತು ಜಾಗವುಳ್ಳವರು ತಮ್ಮ ಆಸ್ತಿಯ ಮೇಲೆ ತೆರಿಗೆ ಕೊಡಬೇಕಾಗಿರುತಿತ್ತು. ಯುವರಾಜ ವಿಕ್ರಮಾದಿತ್ಯನ ಲಕ್ಷ್ಮೇಶ್ವರ ಶಾಸನವು ಪೂಜೆಗಳಿಗೆ ಕೊಡಬೇಕಾದ ಮನೆ ತೆರಿಗೆಗಳ ಬಗ್ಗೆ ತಿಳಿಸುತ್ತದೆ. ಕಾಂದರ್ಬ ಎಂಬ ಹೆಸರಿನ ಅಧಿಕಾರಿಯು ಪೆರಿಯ ಒಸಗೆ, ಉಪ್ಪು ಇವುಗಳ ಹಣವನ್ನು ಹಾಗೂ ಅಪುತ್ರಕ ಧನವನ್ನು ನಾಗರಖಂಡ ೭೦ ಬೇಜಗುರು ೭೦ ಎಂಬೇರಡು ಜಿಲ್ಲೆಗಳಿಂದ ರಾಜನ ಪರವಾಗಿ ಸಂಗ್ರಹಿಸುತ್ತಿದ್ದ ವಿಷಯವು ವಿನಯಾದಿತ್ಯನ ಶಾಸನ ತಿಳಿಸುತ್ತದೆ.

ಪೆರಿಯ ಒಸಗೆ, ಮಹೋತ್ಸವಗಳ ಬಗೆಗಿನ ತೆರಿಗೆ ಇರಬಹುದು. ಮದುವೆ ಮುಂಜಿವೆಗೆ ಮೊದಲಾದ ಧಾರ್ಮಿಕ ಸಂಸ್ಕಾರಗಳಿಗೆ ತೆರಿಗೆಯನ್ನು ವಿಧಿಸಲಾಗುತಿತ್ತು. ತೆರಿಗೆಗಳು ಹಣದರೂಪದಲ್ಲಿಯೂ ಉತ್ಪನ್ನರೂಪದಲ್ಲಿಯೂ ಸಂಗ್ರಹವಾಗುತ್ತಿದ್ದವು. ನಾಣ್ಯ ಪದ್ಧತಿಯ ಬಗ್ಗೆ

ಚ್ಚಿನ ವಿವರಗಳಿಲ್ಲ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ವಿಷಯದಲ್ಲಿಯು ಅಷ್ಟೇ ಹೆಚ್ಚಿನ ಂಖ್ಯೆಯಲ್ಲಿ ಈ ಅರಸನ ನಾಣ್ಯಗಳು ದೊರೆಯದೆ ಇದ್ದುದ್ದಕ್ಕೆ ಅವರ ಚಿನ್ನದ ನಾಣ್ಯಗಳು ಚ್ಚಾಗಿರುವುದೆ ಕಾರಣವಾಗಿರಬೇಕು. ಹೀಗೆ ಚಾಳುಕ್ಯರ ನಾಣ್ಯ ವ್ಯವಸ್ಥೆಯ ಬಗ್ಗೆ ಶಾಸನಗಳಿಂದ ಳಿಯಬಹುದು.

**ಷ್ಟ್ರಕೂಟರು**

೮ನೆಯ ಶತಮಾನದ ಮಧ್ಯಭಾಗದಿಂದ ೧೦ನೆ ಶತಮಾನದ ಕೊನೆಯ ಭಾಗದವರೆಗೆ ರ್ನಾಟಕ ಮತ್ತು ಮಹಾರಾಷ್ಟ್ರದ ಬಹುಭಾಗಗಳನ್ನು ಆಳಿದ ರಾಜಮನೆತನ ಪ್ರಾರಂಭದಲ್ಲಿ ಾಲುಕ್ಯರ ಸ್ವ ಶ್ರಮದಿಂದ ರಾಜ್ಯ ಸಾಧಿಸಿ ಚಾಳುಕ್ಯರ ರಾಜಕೀಯ ಉತ್ತರಾಧಿಕಾರಿಗಳಾಗಿ ಂದನೇ ಕೃಷ್ಣ, ದೃವ, ಮೂರನೇ ಗೋವಿಂದ, ಒಂದನೇ ಅಮೋಘವರ್ಷ(ನೃಪತುಂಗ) ೂರನೇ ಕೃಷ್ಣ ಮುಂತಾದ ಹೆಸರಾಂತ ರಾಜರ ಪರಿಶ್ರಮದಿಂದ ಕರ್ನಾಟಕದ ಕ್ಷಾತ್ರ ಭುತ್ವವನ್ನು ದಕ್ಷಿಣ ಭಾರತದಲ್ಲೆ ಅಷ್ಟೇ ಅಲ್ಲದೆ ಉತ್ತರ ಭಾರತದಲ್ಲಿಯೂ ಒಂದು ಕಡೆ ನೂಜಿನವರೆಗೂ ಇನ್ನೊಂದು ಕಡೆ ಮಿಥಿಲೆಯವರೆಗೂ ಹಬ್ಬಿಸಿ ಸಮಕಾಲೀನ ಭಾರತೀಯ ಾಜಕೀಯದಲ್ಲೆ ಪರಮೋಚ್ಚ ಶಕ್ತಿಯಾಗಿ ಮೆರೆದ ಕನ್ನಡ ಮೂಲದ ರಾಜವಂಶ. ಈ ವಂಶದ ತಿಹಾಸ ಕರ್ನಾಟಕದಲ್ಲಿ ಒಂದು ಹೆಮ್ಮೆಯ ರಾಜಮನೆತನವೆಂದು ತಿಳಿದುಬರುತ್ತದೆ.

**ಷ್ಟ್ರಕೂಟರ ಮೂಲ**

ರಾಷ್ಟ್ರಕೂಟ ಇದೊಂದು ಅಧಿಕಾರ ಸೂಚಕ ಪದ. ಇದರ ಪ್ರಾಚೀನತೆಯನ್ನು ಮೌರ್ಯರ ಸನಗಳಲ್ಲಿ ಬಳಸಲಾದ 'ರಾಷ್ಟ್ರಿಕ' ಎಂಬ ಮಾತಿನಲ್ಲಿ ಗುರುತಿಸಬಹುದು. ಈ ಪದ ಪ್ರಾಕೃತದಲ್ಲಿ ಠಿ' ಎಂದಾಯಿತು. ರಠಿ, ಮಹಾರಠಿ ಎಂದು ಬಿರುದಾಂಕಿತರಾದ ಕೆಲವು ಸಾಮಂತರು ದಕ್ಷಿಣ ಗೂ ಪಶ್ಚಿಮ ಭಾರತದಲ್ಲಿ ಆಳುತ್ತಿದ್ದುದು ತಿಳಿದು ಬರುತ್ತದೆ. ರಾಷ್ಟ್ರಕೂಟ ಎಂಬುದು ಸ್ಕೃತದ ರಾಷ್ಟ್ರ(ದೇಶ, ಪ್ರದೇಶ) ಮತ್ತು ಕೂಟ(ಮುಖ್ಯಸ್ಥ) ಎಂಬ ಪದಗಳಿಂದ ಉಂಟಾದ ಮಪದ. ಗ್ರಾಮಕೂಟ(ಗಾವುಂಡ ಗೌಡ) ಗ್ರಾಮಕ್ಕೆ ಅಧಿಪತಿ ಇದ್ದಂತೆ. ರಾಷ್ಟ್ರಕೂಟ ಒಂದು ೇಶದ ಅಧಿಪತಿ. ಆಂಧ್ರಪ್ರದೇಶದ ಪ್ರಾಚೀನ ಶಾಸನಗಳಲ್ಲಿ ರಟ್ಟಂಗಡಿ ಎಂಬ ಹೆಸರಿನ ದೇಶಿಕ ಅಧಿಕಾರಿ ಕಾಣಿಸಿಕೊಂಡಿದ್ದಾರೆ. ಇದು ಸಹ ರಾಷ್ಟ್ರಕೂಟಕ್ಕೆ ಸಮಾನ ಪದ.[೬]

ವಾಸ್ತವದಲ್ಲಿ ಅಕಾಲವರ್ಷ, ದಾರಾವರ್ಷ, ಪ್ರಭೂತ ವರ್ಷ, ಅಮೋಘವರ್ಷ ಹಾಗೂ ವರ್ಣ ವರ್ಷ ಎಂಬಲ್ಲಿನ 'ವರ್ಷ' 'ವೃಷಿ' ಎಂಬ ಶಬ್ದದ ತದ್ಬವರೂಪ ವೃಷ್ಟಿ> ರಿಷ್ಟಿ> ರಟ್ಟ

ಆಗಿದೆ. ಇಲ್ಲಿ ರಟ್ಟ ಎಂಬ ಹಳೆಯ ಶಾಸ್ತ್ರವನ್ನು ಜ್ಞಾಪಿಸಿಕೊಳ್ಳಬಹುದು. ಉಲ್ಲೇಖ ಈ ಶಾಸನದಲ್ಲಿ ಇದೆ. ಕಡಂಬಗಳಿಗೆ ನಾಡು ಸಾವಿರ ತುಳುನಾಡಿನ ಐದು ನಾಡನ್ನು ನಗಣ್ಣಯ್ಯನ ಕನ್ನೇಶ್ವರಕ್ಕೆ ಗುಂಜಿಗನೂರು–೧೫೦ರ ಚಾಮರಮ್ಮನು ಬಿಟ್ಟುಕೊಟ್ಟ ದತ್ತಿಯನ್ನು ಉಲ್ಲೇಖಿಸುತ್ತದೆ. ಕನ್ನಯ್ಯ ಅಬ್ಬೆ, ಪೊಲೆಯಬ್ಬೆ, ಮತಉತ, ಸೂದ್ರಕೈಯ್ಯರು, ಆಡನೂರಿನ ಪಿರಿಯ ಕೆರೆಯ ಕೆಳಗೆ ತೆಂಕಣ ಎರಡು, ಕಡಂಬನ ನಾಲ್ಕು, ಮತ್ತರ ಭೂಮಿಯನ್ನ ಶಾಂತಿಭಟಾರರಿಗೆ ಮೂವರು ಗಾವುಂಡರು ಮತ್ತು ಕಾಕಂಬಳ್ಳಿ ಕಂಬಯ್ಯನು ದಾನ ಮಾಡಿದ್ದನ್ನು ತಿಳಿಸುತ್ತದೆ.

ಒಟ್ಟಾರೆಯಾಗಿ ಕೆಲವು ವಿಚಾರಗಳ ಬಗ್ಗೆ ಗಮಸಿದಾಗ ಇಲ್ಲಿ ದೊರಕುವ ಮಾಹಿತಿಯ ಪ್ರಕಾರ ಕೀಳ್ಗುಂಟೆಯಾಗಿರುವ ಚಂದಿಯಮ್ಮ ಅರಸನು ಮತ್ತು ಕ್ರಿ. ಶ. ೯೭೦ರ ಗಂಜಿಗಟ್ಟೆ ಶಾಸನದಲ್ಲಿ ಬರುವ ಚಂದಿಯಮ್ಮ ಅರಸ ಇಬ್ಬರು ಒಂದೇ ಎಂದು ಸ್ಪಷ್ಟವಾಗುತ್ತದೆ.

ಇದರಲ್ಲಿ ಎರಡನೇಯ ಗೋವಿಂದನನ್ನು ಬಿಟ್ಟು ಉಳಿದವರ ಉಲ್ಲೇಖವಿದೆ. ಮೊದಲಿಗೆ ಬರುವ ದೇವರ ಕನ್ನಡ ಆಕಾಲವರ್ಷ ೧೧ ಆಗಿದ್ದು ಎರಡೆಯವನು ಇಂದ್ರನ ಮಗ. ಬಹುಶಃ ನಾಲ್ಕನೇಯ ಗೋವಿಂದನಾಗಿದ್ದಾನೆ. ಹಾಗೆಯೇ, ಇರವ ಕನ್ನರನು ಬಡ್ಡಿಗನ ಮಗನಾಗಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ. ಸಿಂಘಣದೇವ ಎನ್ನುವ ರಟ್ಟದೊರೆ ಚಾಲುಕ್ಯರ ಕೈಕೆಳಗೆ ಆಳ್ವಿಕೆ ನಡೆಸುತ್ತಿದ್ದ ಉಲ್ಲೇಖವೂ ಇದೆ.

ಪ್ರಾದೇಶಿಕವಾಗಿ ಕದಂಬಗಳಿಗೆ ಪ್ರದೇಶದಲ್ಲಿ ಅನೇಕ ಅಗ್ರಹಾರಗಳಿದ್ದವು. ಅದರಲ್ಲಿ ೫೮ ಅಗ್ರಹಾರಗಳು ಪ್ರಸಿದ್ಧವಾಗಿದ್ದವು. ಕದಂಬಗಳಿಗೆ ಪ್ರದೇಶವು ವಿಸ್ತಾರವಾದ ಭೂ ಪ್ರದೇಶವನ್ನು ಹೊಂದಿದ್ದು ರಾಷ್ಟ್ರಕೂಟರ ಆಳ್ವಿಕೆಯ ಕಾಲದಲ್ಲೇ ಒಂದು ಸಾವಿರ ಗ್ರಾಮಗಳ ಪರಿಮಿತಿಯನ್ನು ಹೊಂದಿತ್ತು ಎಂದು ತಿಳಿದುಬರುತ್ತದೆ.

ಕ್ರಿ.ಶ.೯೬೪ ಆಡನೂರು ಶಾಸನದಲ್ಲಿ ನೋಡುವುದಾದರೆ ಶ್ರೀಮತ್ ಕೊಕಯ್ಯನು ಕದಂಬಗಳಿಗೆ ನಾಡು ಸಾವಿರವನ್ನು ಆಳುತ್ತಿದ್ದಾಗ ಕನ್ನಯ್ಯನು, ಆಡನೂರನ್ನು ಅಭ್ಯಂತರ ಸಿದ್ಧಿಯಾಗಿ ಏಳೂಂ ಗೌಡಳಂ ಸಾಯಿಂದ ಕೋಮಾರಗದ್ಯಾಣವನ್ನು "ಅಂದರೇ ಏಳು ಗ್ರಾಮಗಳ ಗೌಡಿಕೆಯನ್ನು ಮಾಡುತ್ತಿರುವಾಗ ಅವರಬ್ಬೆ ಹೆಬ್ಬರಿಸಿಯೂ ಕಾನ್ತೇಶ್ವರವೆಂದು, ಉಮಾಮಹೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿ, ಅರಯ ಕೆರೆಯ ಭೂ ತೋಟಗಳನ್ನು ಅಮೃತರಾಸಿ ಭಟಾರರಿಗೆ ಗಾವೂಂಡಗಳು ಮೂರು ಕೊಟ್ಟು ಉಳಿದವನ್ನು ಸರ್ವ ಪರಿವಾರವಾಗಿ ಬಿಟ್ಟರು. ಇದಕ್ಕೆ ಸಾಕ್ಷೀಯಾಗಿ ಶಾಂತಾ ಭಟ್ಟಾರರೂ ಉತ್ತಮರಾಸಿ. ಬಟ್ಟಾರರೂ ಬುಯಳಗಾವುಂಡ ಬಿಜಯತ

ಗಾವುಂಡ ಇನ್ನೂ ಹದಿಮೂರು ಜನರು ಇದ್ದಾರೆ. ಚಲ್ಲಪ್ಪಯ್ಯನೆಂಬ ವ್ಯಕ್ತಿ ಶಾಸನವನ್ನು ಬರೆಸಿದವನು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ.

ಜೈನ, ಕಾಳಾಮುಖ, ವೈದಿಕ ಮತಗಳು ಯಾವುದೇ ಸಂಘರ್ಷಗಳಿಲ್ಲದೆ. ಸಾಮರಸ್ಯತೆಯಿಂದಿತ್ತು. ಎನ್ನುವ ಮಾಹಿತಿಗಳು ಧರ್ಮ ಸಮನ್ವಯತೆಯನ್ನು ಎತ್ತಿಹಿಡಿಯುತ್ತವೆ. ಸಾಂಸ್ಕೃತಿಕ, ಸಾಮಾಜಿಕ ಉದ್ದೇಶಗಳಿಗಾಗಿ ದಾನನೀಡಿ ಶಾಸನಗಳನ್ನು ಹಾಕಿಸಿದ್ದಾಗ ಈ ದಾನವು ಎಲ್ಲ ದಾರ್ಮಿಕ ಮುಖಂಡರ ಸಮಕ್ಷಮದಲ್ಲಿ ಅವರ ಸಾಕ್ಷಿಯೊಂದಿಗೆ ನೀಡುತ್ತಿದದ್ದು, ಪೂರಕ ಮಾಹಿತಿಯನ್ನು ಒದಗಿಸುತ್ತದೆ. ಹಾಗೇಯೆ ಬೇರೆ ಧರ್ಮದವರಿಗೆ ದಾನ ನೀಡುತ್ತಿದ್ದದ್ದು ಇದಕ್ಕೆ ಸಾಕ್ಷೀಯಾಗಿದೆ ರಾಷ್ಟ್ರಕೂಟರು ಸಾಮಾನ್ಯವಾಗಿ ಹಲವಾರು ರೀತಿಯ ನಾಣ್ಯಗಳನ್ನು ಹೊಂದಿದ್ದರು ಎಂಬುದು ತಿಳಿದುಬರುತ್ತದೆ. ಅವುಗಳನ್ನು ನಾವು ನೋಡುವುದಾದರೆ ದ್ರಮ್ಮ, ಸುವರ್ಣ, ಗದ್ಯಾಣ, ಕಾಸು, ಕಳಂಚು, ಮುಂಜಾಡಿ, ಮತ್ತು ಅಕ್ಕಂ ಎಂಬ ಹೆಸರಿನ ನಾಣ್ಯಗಳನ್ನು ರಾಷ್ಟ್ರಕೂಟರ ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಇವುಗಳ ವಿಷಯದಲ್ಲಿ ಹೆಚ್ಚಿನ ಮಾಹಿತಿ ಲಭಿಸುವುದಿಲ್ಲ. ದ್ರಮ್ಮಗಳು ಎರಡು ರೀತಿ ಚಿನ್ನದ ಮತ್ತು ಬೆಳ್ಳಿಯ ದ್ರಮ್ಮಗಳು ಶಾಸನಗಳ ಆಧಾರಗಳ ಮೇಲೆ ಸುವರ್ಣವೆಂಬ ನಾಣ್ಯ ವಿಶೇಷವಾಗಿ ಪ್ರಚಾರದಲ್ಲಿತ್ತೇಂದು ಇದು ತೂಕದ್ದಾಗಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ.

ಒಂದು ಗದ್ಯಾಣಕ್ಕೆ ಎರಡು ಕಳಂಜುಗಳು ಸಮ ಎಂದು ಶಾಸನವೊಂದರಲ್ಲಿ ಹೇಳಿದೆ. ಅಂದರೆ ಇದು ೪೮ ಗ್ರೇನ್ ತೂಕದ್ದಾಗಿರಬೇಕು. ೨೦ ಕಾಸುಗಳಿಗೆ ೭ ಕಳಂಚುಗಳು (ಹವಳ ಮುತ್ತು, ಹಾಗೂ ಸುಗಂಧ ದ್ರವ್ಯಗಳನ್ನು ತೂಗುವಾಗ ಬಳಸುವ ಒಂದು ಚಿಕ್ಕತೂಕದ ಒಂದು ಪ್ರಮಾಣ) ಸಮವೆಂದು ಮತ್ತೊಂದು ಶಾಸನದಿಂದ ತಿಳಿದು ಬರುತ್ತದೆ. ಕಳಂಚು ನಾಣಯದ ಇಪ್ಪತನೆಯ ಒಂದು ಭಾಗದ ನಾಣ್ಯಕ್ಕೆ ಮುಂಜಾಡಿ ಎಂದು ಹೆಸರಿದ್ದಿತು. ಬಹುಶಃ ಇದು ಎರಡುವರೆ ಗ್ರೇನ್ ತೂಕದ ನಾಣ್ಯ ಒಂದು ಕಾಸಿನ ಇಪ್ಪತ್ತನೆಯ ಒಂದು ಭಾಗವೇ ಅಕ್ಕುಂ ಎಂಬ ನಾಣ್ಯ.

ಮಹಾರಾಷ್ಟ್ರದಲ್ಲಿ ದೊರಕಿದ ಕೆಲವು ನಾಣ್ಯಗಳಲ್ಲಿ ಶ್ರೀ ಕೃಷ್ಣ ರಾಜಸ್ಯ ಎಂಬ ಬರಹವಿದೆ. ಇವು ರಾಷ್ಟ್ರಕೂಟ ಒಂದನೆಯ ಕೃಷ್ಣನ ನಾಣ್ಯಗಳೆಂದು ಕೆಲವರು ಭಾವಿಸಿದ್ದರು. ಆದರೆ ಇತ್ತೀಚಿನ ಸಂಶೋಧನೆಗಳಿಂದ ಇವು ಕಳಚೂರಿ ನಾಣ್ಯಗಳೆಂದು ತಿಳಿದು ಬಂದಿದೆ. ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಳಖೇಡದಲ್ಲಿ ದೊರಕಿದ್ದು, ಅವುಗಳ ಮೇಲಿನ ಬರಹದಲ್ಲಿ ಕಾಕನೂರು

ಎಂಬ ಹೆಸರಿದೆ ಎಂದು ಓದಿ ಕೆಲವು ವಿದ್ವಾಂಸರು ಇವು ರಾಷ್ಟ್ರಕೂಟ ಇಮ್ಮಡಿ ಕರ್ಕರಾಜನದ್ದೆಂದು ಅಭಿಪ್ರಾಯಪಟ್ಟರು. ಆದರೆ ಮತ್ತೆ ಕೆಲವರು ಈ ಬರಹವನ್ನು ಕಾಕತೀಯ ಎಂದು. ಒಟ್ಟನಲ್ಲಿ ಈ ವಿಷಯದಲ್ಲಿ ಒಮ್ಮತವಿಲ್ಲ " ಎಂ ಹೆಚ್ ಕೃಷ್ಣ ೫೭.೯ ಗ್ರೇನ್ ತೂಕದ ಕೆಲವು ಚಿನ್ನದ ನಾಣ್ಯಗಳನ್ನು ರಾಷ್ಟ್ರಕೂಟರ ನಾಣ್ಯಗಳೆಂದು ಅಭಿಪ್ರಾಯಪಟ್ಟಿದ್ದಾರೆ.

**ಕಲ್ಯಾಣದ ಚಾಲುಕ್ಯರು**

ರಾಷ್ಟ್ರಕೂಟರ ಆಳ್ವಿಕೆಯನ್ನು ಕ್ರಿ. ಶ. ೯೭೩ ರಲ್ಲಿ ಕೊನೆಗಾಣಿಸಿದ ಇಮ್ಮಡಿ ತೈಲ ಅಥವಾ ತೈಲಪನು ಕಲ್ಯಾಣ ಚಾಲುಕ್ಯರ ವಂಶವನ್ನು ಸ್ಥಾಪಿಸಿದ. ಇವರ ಸಾಮ್ರಾಜ್ಯ ಮುಂದೆ ಎರಡು ಶತಮಾನಗಳ ಕಾಲ ಕರ್ನಾಟಕದ ಸಂಸ್ಕೃತಿಯನ್ನು ಸಮೃದ್ದವಾಗಿ ಬೆಳೆಸಿ ಮುಂದುವೆಸಿತು. ಈ ವಂಶದ ಪ್ರಖ್ಯಾತ ಅರಸರಾದ ಇಮ್ಮಡಿ ತೈಲಪ, ಸತ್ಯಾಶ್ರಯ, ಒಂದನೆ ಸೋಮೇಶ್ವರ, ಆರನೇ ವಿಕ್ರಮಾದಿತ್ಯರು ಸಾಮ್ರಾಜ್ಯ ವಿಸ್ತರಣಾಕಾಂಕ್ಷಿಗಳು ಮಾತ್ರ ಅಲ್ಲದೆ ಕಲೆ, ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ನೀಡಿದರು. ಕಲ್ಯಾಣದ ಚಾಲುಕ್ಯರ ಕಾಲವು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಸಂಕೀರ್ಣವಾದ ಕಾಲವೂ ಆಗಿತ್ತು. ಉತ್ತರದಲ್ಲಿ ಮುಸ್ಲಿಮರ ದಾಳಿಗಳಿಂದ ರಾಜಕೀಯ ವ್ಯವಸ್ಥೆ ಶಿಥಿಲವಾಗಿತ್ತು. ದಕ್ಷಿಣದಲ್ಲಿ ಚೋಳರು ಪ್ರಬಲರು ರಾಜಕೀಯ ಶಕ್ತಿಯಾಗಿ ರೂಪಗೊಳ್ಳುತ್ತಾ ಚಾಲುಕ್ಯರಿಗೆ ಪ್ರತಿ ಸವಾಲನ್ನು ಒಡ್ಡಿದ್ದರು.

ಕಲ್ಯಾಣದ ಚಾಲುಕ್ಯರ ಕಾಲಾವಧಿ ಕ್ರಿ. ಶ. ೯೭೩ – ೧೧೯೮ ಎಂಬುದು ತಿಳಿದು ಬರುತ್ತದೆ ಇವರ ರಾಜಧಾನಿಗಳು ಕ್ಯಾಣ, ಯಾಗ್ಲರ್, ಪೊಚ್ಚಲಕೆರೆ, ಕೊಲನುಪಾಕ. ಪ್ರಮುಖ ಅರಸರು ತೈಲಪ, ೨ನೇ ಜಯಸಿಂಹ ೨ನೇ ಸೊಮೇಶ್ವರ ೪ನೇ ವಿಕ್ರಮಾದಿತ್ಯ ಇವರುಗಳಲ್ಲಿ ಕಲ್ಯಾಣ ಚಾಲುಕ್ಯರಲ್ಲಿ ೬ನೇ ವಿಕ್ರಮಾದಿತ್ಯನು ಪ್ರಬಲ ರಾಜ ಎಂಬುದು ಕೆಲವು ಶಾಸನಗಳಿಂದ ನಮಗೆ ತಿಳಿದುಬರುತ್ತದೆ. ಇವರ ಲಾಂಛನ "ವರಾಹ" ವಾಗಿತ್ತು.

ಬೆಳಗಾವಿ ಪ್ರದೇಶವನ್ನಾಳಿದ ರಾಜ ಮನೆತನಗಳಲ್ಲಿ ಸವದತ್ತಿಯ ರಟ್ಟರು ಪ್ರಮುಖರು . ರಟ್ಟರ ಉಗಮ ಭಾಷೆ ಕುಲವಂಶ, ರಾಜಧಾನಿ ಮುಂತಾದ ವಿಚಾರಗಳು ಜಿಜ್ಞಾಸೆಗೆ ಎಡೆಯಾಗಿವೆ. ಲಭ್ಯವಿರುವ ಆಧಾರಗಳ ಸಹಾಯದಿಂದ ರಟ್ಟರು ಯಾರು? ಅವರು

ಎಲ್ಲಿಯವರು? ಎಂಬುದರ ಬಗ್ಗೆ ಅನೇಕ ವಿದ್ವಾಂಸರು ಉಪಲಬ್ದವಾಗಿದ್ದ ಆಧಾರಗಳ ಮೇಲೆ ತೀರ್ಮಾನವನ್ನು ಕೊಡಲು ಪ್ರಯತ್ನಿಸಿದ್ದಾರೆ.

## ೨.೨ ರಟ್ಟರ ಮೂಲ

ಡಾ. ಎ. ಎಸ್. ಅಳ್ತೇಕರರು ರಾಷ್ಟ್ರಕೂಟ ಎಂಬ ಪದವು ಯಾವುದೇ ವಂಶ ಅಥವಾ ಬುಡಕಟ್ಟಿನ ಸಂಕೇತವಲ್ಲವೆಂದು ಅದು ಪ್ರಾಚೀನ ಕಾಲದಲ್ಲಿ ರಾಷ್ಟ್ರವೆಂಬ ಪ್ರಾದೇಶಿಕ ವಿಭಾಗದ ಮುಖ್ಯಾಧಿಕಾರಿಗೆ ಕೊಟ್ಟಿದ್ದ ಉದ್ದೆಯ ಅಂಕಿತವೆಂದು ಹೇಳಬಹುದು. ಈ ಅಧಿಕಾರಿಗಳು ಕೇಂದ್ರ ಸರ್ಕಾರಕ್ಕೆ ಅಧೀನರಾಗಿದ್ದರು. ಕೇಂದ್ರ ಸರ್ಕಾರದ ಬಲ ಕುಗ್ಗಿದಾಗ ಸ್ವತಂತ್ರರಾದರು. ಉಸ್ಮಾನಾಬಾದ ಜಿಲ್ಲೆಯ ಲಟ್ಟೂರು(ಲಾತೂರು) ಇವರ ಮೂಲಸ್ಥಾನವೆಂದು ಅಭಿಪ್ರಾಯಪಡುತ್ತಾರೆ. (ರಾಷ್ಟ್ರಕೂಟಾಸ್, ಆಂಡ್ ಟೈಮ್ಸ್)

ರಟ್ಟ, ಎನ್ನುವ ಕನ್ನಡ ಮಾತು ತೋಳಬಲವನ್ನು ಸೂಚಿಸುವ 'ರಟ್ಟ' ಎಂಬ ಮಾತಿಗೆ ಸಮನಾದ ಅರ್ಥವನ್ನು ಸೂಚಿಸುವ ಪದ. ರಟ್ಟರ, ಕೂಟ, ಎನ್ನುವುದೇ ಮುಂದೆ ರಾಷ್ಟ್ರಕೂಟ ಎಂದಾಯ್ತು ಎಂದು. ಎಂ.ವಿ. ಕೃಷ್ಣ ಹಾಗೂ ಕೇಶವಭಟ್ಟ, ಕರ್ನಾಟಕ ಇತಿಹಾಸ ದರ್ಶನದಲ್ಲಿ ಹೇಳುತ್ತಾರೆ.

ಕರಹಾಡ ಶಾಸನದಿಂದ ಮಳಖೇಡದ ರಾಷ್ಟ್ರಕೂಟ 'ರಟ್ಟ' ವಂಶದವರೆಂದು ರಟ್ಟರು ಮೊದಲಿನಿಂದಲೂ ದಕ್ಷಿಣ ಭಾರತದವರೆಂದು ಈ 'ರಟ್ಟ' ಶಬ್ದವು ದ್ರಾವಿಡ ಭಾಷಯದೆಂದೂ ರಟ್ಟರಿಂದ ರಾಷ್ಟ್ರಕೂಟವು ಅಬ್ಬಿತೆಂದು ತಿಳಿಯುತ್ತದೆ. ಆಲೂರ ವೆಂಕಟರಾಯರು.

ಲಾಟ ಎಂಬುದರ ರೂಪ 'ರಟ್ಟ' ಎಂದಿರಬಹುದು. ರಾಷ್ಟ್ರಕೂಟರೇ ತಮ್ಮ ಶಾಸನಗಳಲ್ಲಿ ರಟ್ಟ ವಂಶೋದ್ಭವ ಎಂಬುದಾಗಿ ಹೇಳಿಕೊಂಡಿರುವುದರಿಂದ ರಟ್ಟ ಎಂಬ ಪದವು ಭ್ರಷ್ಟವಾಗಿ ಲಟ್ಟು' ಲಾಟ ಎಂದಾಗಿರಬಹುದು. ಲತ್ತಲೂರು ಈಗಿನ ಲತ್ತೂರು. ಡಾ. ಶಂ, ಭಾ, ಜೋಶಿ (ಕನ್ನಡದ ನೆಲ) ಲಾಟದೇಶದ ಮೂಲ ನಿವಾಸಿಗಳು 'ರಠೀಕ' ರಟ್ಟರೆಂದೂ ಲಾಟ ದೇಶವು ರಾಷ್ಟ್ರಕೂಟರ ಮೂಲವೆಂದು ಲಾಟರು > ರಾಟರು > ರಟ್ಟರು > ರಾಷ್ಟ್ರಕೂಟರು ಎಂದು ವಿವರಣೆ ಕೊಡುತ್ತಾರೆ.

ಕರ್ನಾಟಕದಲ್ಲಿ ಆಳಿದ ರಾಷ್ಟ್ರಕೂಟರು ತಾವು ರಟ್ಟ ವಂಶದವರೆಂದು ಲತ್ತಟೂರ್ರುವರಾದೀಶ್ವರರೆಂದು ಕರೆದುಕೊಳ್ಳುವುದನ್ನು ನೋಡಿದರೆ ಹತ್ತನೆ ಶತಮಾನದಿಂದ

ಬೆಳಗಾವಿ ಜಿಲ್ಲೆಯ ಸವದತ್ತಿಯಲ್ಲಿ ರಟ್ಟರೆಂಬ ಮಾಂಡಲೀಕರು ಅಧಿಕಾರದಲ್ಲಿದ್ದರು. ಲತ್ತ ಎಂಬುದು ರಟ್ಟ ಪದದ ಪ್ರಾಕೃತಿಕರೂಪ ಲತ್ತಲೂರು > ಲತ್ತನಲೂರು > ಲತ್ತಲೂರು ಲಾತೂರು ಆಗಿರಲು ಸಾಕು.

ರಟ್ಟರ ಮತ ಶ್ರೀ ಮನ್ಮೆಳಾಪ ತೀರ್ಥನ್ಯ ಗಣೀಕಾರೆಯ ನಾಮಾನಿ ಸ್ಥಾಪಿಸಿದ ಕಾರೆಯ ಪಂಥದ 'ಪೃಥ್ವಿರಾಮನು' ರಟ್ಟರ ಮೂಲ ಪುರುಷನು ಆದುದ್ದರಿಂದ ರಟ್ಟರ ಅರಸರು ಜೈನಧರ್ಮದವರಾಗಿದ್ದರು ಸವದತ್ತಿಯ ರಟ್ಟರ ಬಹುತೇಕ ಶಾಸನಗಳ ಆರಂಭದಲ್ಲಿ '... .. .. ಜೀಯಾತ್ ತ್ರೈಲೋಕ ನಾಥಸ್ಯ ಶಾಸನಂ ಜಿನ ಶಾಸನಂ' ಎಂಬುದಾಗಿ ಉಲ್ಲೇಖಿಸಿರುವುದರಿಂದ ಇವರು ಜೈನ ಪಂಥಕ್ಕೆ ಸೇರಿದವರಾಗಿದ್ದರು.

**೨.೩ ರಟ್ಟರ ಶಾಖೆಗಳು**

ರಟ್ಟರ ಹೆಸರಿನ ಮೂರು ರಾಜ್ಯ ಮನೆತನಗಳು ಆಳಿದ್ದು ತಿಳಿದು ಬರುತ್ತದೆ.

೧. ಅಮರ್ದಕ ಪುರದ ರಟ್ಟರು

೨. ಶಿಲಹಾರ ರಟ್ಟರು

ಅ) ಕೊಲ್ಲಾಪುರ ಶಿಲಹಾರರು

ಬ) ದಕ್ಷಿಣ ಶಿಲಹಾರರು

ಕ) ಉತ್ತರ ಕೊಂಕಣ ಠಾಣೆ ಶಿಲಹಾರರು

೩. ಸವದತ್ತಿಯ ರಟ್ಟರು-ಇವರಲ್ಲಿ ಎರಡು ಶಾಖೆಗಳಿವೆ

**೧. ಅಮರ್ದಕ ಪುರದ ರಟ್ಟರು**

ಸೇವುಣರ ೨ನೇ ಬಿಲ್ಲಮನ ಅರ್ದಾಪುರದ ಶಾಸನ ಒಂದರಿಂದ ಅಮರ್ದಪುರವೆಂಬಲ್ಲಿ ರಟ್ಟಮನೆತನವೊಂದು ಆಳ್ವಿಕೆಯನ್ನು ನಡೆಸುತ್ತಿರುವುದರಿಂದ ಇವರಿಗೆ ಅಮರ್ದಕ ಪುರದರಟ್ಟರು ಎಂದು ಕರೆದಿದ್ದರು.

ಇಂದಿನ ನಾಂದೇಡ ಜಿಲ್ಲೆಯ ಹತ್ತಿರದಲ್ಲಿರುವ ಒಂದು ಸಣ್ಣಗ್ರಾಮ ಅದುವೇ ಅಮರ್ದಕಪುರ. ಅದೇ ಶಾಸನದಿಂದ ಇನ್ನೊಂದು ವಿಷಯ ತಿಳಿದುಬರುವುದೇನೆಂದರೆ ಆಗ ಅಲ್ಲಿ ಬಲ್ಲಾಳನೆಂಬ ಅರಸ ರಾಜ್ಯವಾಳುತ್ತಿದ್ದನು. ಈತನಿಗೆ 'ಮೈಲುಗಿ ಮಾಂಡಲಿಕ ಪ್ರತಿಷ್ಠಾಪನಾಚಾರ್ಯ ಯಾದವರಾಜ್ಯ ಸ್ಥಾಪನಾಚಾರ್ಯ ಎಂಬ ಬಿರುದುಗಳಿದ್ದವು.

ಶಿಲಹಾರ ರಟ್ಟರು

ಖಾರೇ ಪಟ್ಟಣದ ತಾಮ್ರಪಟ ಶಾಸನದಲ್ಲಿ ಕ್ರಿ.ಶ. ಸಮಾರು ೭೬೫ರಿಂದ ಮುಂದೆ ೨೫೦ ವರ್ಷಗಳ ವರೆಗಿನ ಖಾರೇಪಟ್ಟಣ ಊರಿನ ಇತಿಹಾಸವು ಬರುತ್ತದೆ. ಈ ಕಾಲಾವಧಿಯಲ್ಲಿ ದಕ್ಷಿಣ ಕೊಂಕಣ ಶಿಲಾಹಾರ ಮನೆತನದ ರಾಜರು ಕೊಂಕಣ ಪ್ರಾಂತ್ಯವನ್ನು ಹಾಳುತ್ತಿದ್ದರು. ಇದೇ ತಾಮ್ರಪಟ ಶಾಸನದಲ್ಲಿ (ಕ್ರಿ.ಶ.೧೦೦೮) ಶಿಲಾಹಾರ ಮನೆತನದ ರಟ್ಟರಾಜನು ಕೆಲವೊಂದು ಊರುಗಳನ್ನು ಅವೇಶ್ವರವೆಂಬ ಶಿವ ದೇವಾಲಯಕ್ಕೆ ದತ್ತಿ ಕೊಟ್ಟಿದ್ದನ್ನು ಉಲ್ಲೇಖಿಸಿದ್ದಲ್ಲದೆ ಶಿಲಾಹಾರ ರಟ್ಟರಾಜ ವಂಶಾವಳಿಯೊಂದಿಗೆ ಒಂಬತ್ತು ಅರಸರ ಇತಿಹಾಸವನ್ನು ಕೊಡಲಾಗಿದೆ. ಶಿಲಾಹಾರ ರಟ್ಟ ಸಂತತಿಯ ಸ್ಥಾಪಕ ಸಣ್ಣಫುಲ್ಲನು.

೩, ಸವದತ್ತಿಯ ರಟ್ಟರು

ಸವದತ್ತಿಯ ಸಂಸ್ಕೃತ ರೂಪವೇ ಸುಗಂಧವರ್ತಿ ಈ ಊರನ್ನು ಶ್ರವಣರಿಗೆ ದತ್ತಿ ಬಿಟ್ಟಿದ್ದಕ್ಕಾಗಿ ಶ್ರವಣರಿಗೆ ದತ್ತಿ-ಶ್ರವಣ ದತ್ತಿ-ಸವದತ್ತಿಯಾಯಿತು. ಮುಂದೆ ಸವದತ್ತಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರಿಂದ ಇವರಿಗೆ ಸವದತ್ತಿಯ ರಟ್ಟರು ಎಂದು ಹೆಸರು ಬಂತು.

ಈ ರಟ್ಟರು ರಾಷ್ಟ್ರಕೂಟ ಮನೆತನಕ್ಕೆ ಸೇರಿದವರಾಗಿದ್ದರಿಂದ ಇವರನ್ನು 'ಲಟ್ಟನೂರ ಪುರವರಾಧೀಶ್ವರ' ರೆಂದು ಕರೆಯಲಾಗಿದೆ.

ಅ) ರಟ್ಟರ ಮೊದಲ ಶಾಖೆ

ಮೈಲಾಪ ತೀರ್ಥನೆಂಬ ಜೈನಗುರು ಸ್ಥಾಪಿಸಿದ ಕಾರೆಯ ಪಂಥಕ್ಕೆ ಸೇರಿದ ಪೃಥ್ವಿರಾಮನು ರಟ್ಟರ ಮೂಲ ಪುರುಷನು. ಈ ಮೊದಲನೆಯ ಶಾಖೆಯು ಬಹಳ ಕಾಲ ಬಾಳಲಿಲ್ಲ.

ಆ) ಎರಡನೆಯ ಶಾಖೆ

ನನ್ನನಿಂದ ಆರಂಭಗೊಂಡ ಎರಡನೆಯ ಶಾಖೆಯು ಕ್ರಿ.ಶ. ಸುಮಾರು ೯೩೦ರಿಂದ ೧೨೩೦ ರ ವರೆಗೆ ೩೦೦ ವರ್ಷಗಳ ವರೆಗೆ ಇಂದಿನ ಬೆಳಗಾವಿ ಜಿಲ್ಲೆ ಮಹರಾಷ್ಟ್ರದ ಗಡಹೀಂಗ್ಲಜ, ಚಂದಗಡ ತಾಲ್ಲೂಕುಗಳು ವಿಜಯಪುರ(ಬಿಜಾಪುರ) ಜಿಲ್ಲೆ ಜಮಖಂಡಿ ತಾಲ್ಲೂಕು ಗದಗ್ ಜಿಲ್ಲೆಯ ಕೆಲಭಾಗ ಇವರು ಆಳಿದರು ಎಂದು ತಿಳಿದು ಬರುತ್ತದೆ. ಸವದತ್ತಿಯಲ್ಲಿ

ಮೊದಲು ಮಾಂಡಲೀಕರಾಗಿ ಆ ನಂತರ ವೇಳುಗ್ರಾಮಕ್ಕೆ (ಇಂದಿನ ಬೆಳಗಾವಿ) ಸ್ವತಂತ್ರರಾಗಿ ಆಳಿದರು. ಇವರ ವಂಶಾವಳಿ.

ರಟ್ಟರ ವಂಶಾವಳಿ

೧ನೆಯ ಶಾಖೆ – ೧) ಮೇರಡ (ಮೂಲಪುರುಷ)

↓

೨) ಪೃಥ್ವಿರಾಮ (ಮಗ)

↓

೩) ಪಿಟ್ಟಗ+ನೀಜಿಯಂಬ್ಬರಸೆ(ಮಗ)

↓

೪) ಶಾಂತಿವರ್ಮ

↓

೨ನೇಯ ಶಾಖೆ ೫) ನನ್ನ (ಮೂಲ ಪರುಷ )೯೩೦

↓

೬) ೧ನೆಯ ಕತ್ತ(ಕಾರ್ತವೀರ್ಯ ಮಗ) ೯೮೦

↓

೨ನೆಯ ತೈಲಪನ ಸಾಮಂತ ಇವನ ಕಾಲದ ಶಾಸನ ಸೋಗಲದಲ್ಲಿದೆ.

೭) ದಾಯಿಮ — ೮) ೧ನೆಯ ಕನ್ನಕೈರ

೮) ೧ನೆಯ ಕನ್ನಕೈರ → ೯) ಎರಗ(೧೦೪೦) — ೧೦) ಅಂಕ(೧೦೪೦)

೧೧) ಅರಿಭೂಪಾಳ

೧೨) ೧ನೇಯ ಸೇನ (ಮೈಳಲಾದೇವಿ)
(೧೦೯೪-೯೯) ತ್ರಿಭುವನ ಮಲ್ಲನ ಸಾಮಂತ

೧೩) ೨ನೆಯ ಕಣ್ಣ-(೧೦೮೮)
ರ್ತ

೧೪) ೨ನೇಯ ಅಥವಾ ಇಮ್ಮಡಿ

ಅಥವಾ (ಇಮ್ಮಡಿ ಕಣ್ಣೇಶ್ವರ)
೬ನೇ ವಿಕ್ರಮಾದಿತ್ಯನ ಸಾಮಂತ
ಸಾಮಂತ

(೧೦೯೯) ರಾಣಿ-ಭಾಗಲದೇವಿ
೧೫) ಇಮ್ಮಡಿ ಸೋಮೇಶ್ವರನ



೧೬) ೨ನೇಯ ಸೇನ(ಕಾಲಸೇನ)
(೧೦೯೯) (ರಾಣಿ-ಲಕ್ಷ್ಮಿದೇವಿ)
೬ನೇ ವಿಕ್ರಮಾದಿತ್ಯನ ಮಗ

ಜಯಕರ್ಣಸೇನಾಪತಿಗೆ ಸಾಮಂತ



೧೭) ಮುಮ್ಮಡಿಕಾರ್ತ ವೀರ್ಯ
೧೧೪೩- ೬೫ (ರಾಣಿ-
ಪದ್ಮಲದೇವಿ)

ಕಳಚೂರಿ ಸೋಯಿದೇವನ ಸಾಮಂತ



೧೮) ೧ನೇಯ ಲಕ್ಷ್ಮಿದೇವಿ (೧೧೭೦)
(ರಾಣಿ ಚಂದಲದೇವಿ) ಸ್ವತಂತ್ರರಾಗಿ
ವೇಣು ಗ್ರಾಮವನ್ನು
ರಾಜಧಾನಿಯನ್ನಾಗಿ
ಮಾಡಿಕೊಂಡು ಆಳಿದರು.



೧೯) ೪ನೆಯ ಕಾರ್ತವೀರ್ಯ-೧೦೯೯ ೨೦) ಮಲ್ಲಿಕಾರ್ಜುನ-
೧೦೯೯

(ರಾಣಿ- ವಚಲಾದೇವಿ)



೨೧) ಇಮ್ಮಡಿ ಲಕ್ಷ್ಮೀದೇವ (೧೨೨೮)

ಸವದತ್ತಿಯ ರಟ್ಟರ ಪ್ರಮುಖ ೨೦ ಜನ ಅರಸರ ಕಾಲಾನುಕ್ರಮ ಹಾಗೂ ಈ ಪ್ರದೇಶದ ಹದಿನಾಲ್ಕು (೧೪) ಶಾಸನಗಳಲ್ಲಿ ಅಡಕವಾಗಿವೆ. ಇವುಗಳ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

**೧. ಮೇರಡ (ಕ್ರಿ.ಶ.ಸು. ೮೫೦)**

ಮೇರಡನು ಸವದತ್ತಿ ರಟ್ಟರ ಮೊದಲನೆ ಶಾಖೆಯ ಮೂಲಪುರುಷ[1] 'ಇವನಿಗೆ ಪೃಥ್ವಿವರ್ಮನೆಂಬ ಮಗನಿದ್ದನು. ಶಾಸನದಲ್ಲಿ ಇವನನ್ನು 'ಸತ್ಯರತ್ನಪ್ರರೋಹಾದ್ರಿ ಮೇರಡ' ಎಂದು

ವರ್ಣಿಸಲಾಗಿದೆ. ಇವನು ಅತ್ಯಂತ ಪರಾಕ್ರಮಶಾಲಿಯಾಗಿದ್ದನು. 'ಮಹಿಳಾಪತೀರ್ಥ'ನೆಂಬ ಜೈನ ಗುರು ಇವರ ವಂಶ ಸ್ಥಾಪಕನಾಗಿದ್ದನು.[೨]

**೨. ಪೃಥ್ವಿರಾಮ (ಕ್ರಿ.ಶ. ಸು. ೮೭೬)**

ರಾಷ್ಟ್ರಕೂಟರ ವಂಶದಲ್ಲಿ ೨ನೇ ಶ್ರೀಕೃಷ್ಣದೇವನ ಮಹಾಸಾಮಂತನಾಗಿದ್ದುಕೊಂಡು, ಕುಹುಂಡಿ ಮಂಡಳದಲ್ಲಿ ಸುಗಂಧವರ್ತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಪೃಥ್ವಿರಾಮನು ಆಳುತ್ತಿದ್ದನು. ಕುಹುಂಡಿ-೩೦೦೦ ಮಂಡಳದಲ್ಲಿರುವ ಸುಗಂಧವರ್ತಿ ೧೨ ಹಳ್ಳಿಗಳ ನಾಡಾಗಿತ್ತು.[೩] ಕ್ರಿ.ಶ. ೮೭೬ರ ಸವದತ್ತಿಯ ಶಾಸನದಲ್ಲಿ "ಸತ್ಯರತ್ನಪ್ರರೋಹಾದ್ರಿ ಮೇಱಡಸ್ಯಾಗ್ರನನ್ದನ" ಎಂದಿರುವುದರಿಂದ ಪೃಥ್ವಿರಾಮನು ಮೇರಡನ ಹಿರಿಯಮಗನೆಂದು ಸ್ಪಷ್ಟವಾಗುತ್ತದೆ. ಇವನಿಗೆ ತಮ್ಮಂದಿರಿದ್ದಿರಬೇಕು.

ಪೃಥ್ವಿರಾಮನು ಜೈನನಾಗಿದ್ದು ಯಾಪನೀಯಸಂಘದ ಮೈಳಾಪಾನ್ವಯದ ಇಂದ್ರಕೀರ್ತಿ ಮುನಿಗಳ ಶಿಷ್ಯನಾಗಿದ್ದನು. ಇವನು ಮೈಲಾತೀರ್ಥದ ಗುರುಕುಲದಲ್ಲಿ ಕಲಿಯುತ್ತಿದ್ದುದಾಗಿ ದಾಖಲಾಗಿದೆ.[೪] ಇದರಿಂದ ಸವದತ್ತಿಯಲ್ಲಿ ಯಾಪನೀಯ ಸಂಘದ ಮೈಳಾಪಾನ್ವಯದ ವಿದ್ಯಾಪೀಠವು ಕ್ರಿ.ಶ. ೮ನೆಯ ಶತಮಾನ ಕಾಲದಲ್ಲಿತ್ತೆಂದು ಸ್ಪಷ್ಟವಾಗುತ್ತದೆ. ಪೃಥ್ವಿರಾಮನ ಮನೆತನವು ಯಾಪನೀಯಸಂಘದ ಮೈಳಾಪತೀರ್ಥದ ಕಾರೆಯಗಣದವರಾದ ಜೈನ ಗುರುವಿನಿಂದ ಸ್ಥಾಪನೆಯಾಗಿದೆ. ಆದ್ದರಿಂದಲೇ ಇವರನ್ನು ಸಹಜವಾಗಿಯೇ ಮೈಳಾಪತೀರ್ಥಾನ್ವಯರೆಂದೇ ಗುರುತಿಸಲಾಗಿದೆ. ಕ್ರಿ.ಶ. ೯೮೦ರ ಸವದತ್ತಿ ಶಾಸನದಲ್ಲಿ ಇವರನ್ನು ವೈಸಾನ್ವಯರೆಂದೂ, ಅದನ್ನೇ ಡಾ॥ ಹಂಪನಾರವರು ವೈಶ್ಯಕುಲದವರೆಂದೂ ಗುರುತಿಸಿದ್ದಾರೆ.

ಪೃಥ್ವಿರಾಮನ ದೇಹ ಸೌಂದರ್ಯ ಮತ್ತು ಪರಾಕ್ರಮವನ್ನು ಕುರಿತು ಕ್ರಿ.ಶ. ೯೮೧ರ ಸವದತ್ತಿಯ ಶಾಸನದಲ್ಲಿ-

> "ಶ್ರೀಮದಮರೇಂದ್ರವಿಭವೋ ।
> ದ್ದಾಮಸಂಗ್ರಾಮರಾಮನೂರ್ಜ್ಜಿತ ತೇಜಂ ॥
> ಭೀಮಪರಾಕ್ರಮನೆಸೆದವ ।
> ನೀಮಹಿಯೊಳ್ ಪೃಥ್ವಿರಾಮನನುಪಮರೂಪಂ ॥

ಎಂದು ವರ್ಣಿಸಲಾಗಿದೆ.[೫] ಇವನು ಇಂದ್ರನಂತೆ ಅಮರನೂ, ಉದ್ಧಾಮನೂ, ಸಂಗ್ರಾಮದಲ್ಲಿ ರಾಮನನ್ನು ಮೀರಿಸಿದವನೂ, ತೇಜೋಮಯನೂ, ಭೀಮನಂತೆ ಪರಾಕ್ರಮನೂ, ಅತ್ಯಂತ

ಸುಂದರ ರೂಪವುಳ್ಳವನಾಗಿದದನು. ಕ್ರಿ.ಶ. ೮೭೬ರ ಸವದತ್ತಿ ಶಾಸನದಲ್ಲಿ "ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ ವೀರಲಕ್ಷ್ಮೀಕಾಂತ ವಿರೋಧಿ ಸಾಮನ್ತನಗವಜ್ರದಣ್ಡಂವಿದ್ವಜನಕಮಳಮಾರ್ತ್ತಣ್ಡಂ ಸುಭಟಚೂಡಾಮಣಿ ಭೃತ್ಯಚಿಂತಾಮಣಿ ಶ್ರೀಮನ್ಮಹಾಸಾಮನ್ತೇನ್ ಪೃಥ್ವಿರಾಯೇಣ" ಎಂಬ ಇವನ ಬಿರುದಾವಳಿಯಿವೆ. ಇವನು ಮಹಾಸಾಮಂತನೂ, ಯುದ್ಧವೀರನೂ, ಜಯಶಾಲಿಯೂ, ವಿರೋಧಿರಾಜ ಸಾಮಂತನೂ, ವಜ್ರದಂಡದಂತೆ ಬಲಿಷ್ಠನೂ, ಕವಿಗಳು ಹಾಗೂ ವಿದ್ವಜ್ಜನಿರಿಗೆ ಆಶ್ರಯದಾನೂ, ಆಗಿದ್ದನು.

ಪೃಥ್ವಿರಾಮನು ಸವದತ್ತಿಯಲ್ಲಿ ಕ್ರಿ.ಶ. ೮೭೦ರ ಆಸುಪಾಸಿನಲ್ಲಿ ಜಿನಲಯವನ್ನು ಕಟ್ಟಿಸಿದ್ದಾನೆ. ಈ ಜಿನಾಲಯವು ಮೈಳಾಪತೀರ್ಥದಲ್ಲಿತ್ತು.[೬] ಅಂದರೆ ಇಂದಿನ ಸವದತ್ತಿಯ ಎಲ್ಲಮ್ಮನ ಇಡೀ ಗುಡ್ಡವೇ ಮೈಳಾಪತೀರ್ಥವಾಗಿತ್ತು. ಪೃಥ್ವಿರಾಮನು ಸುಗಂಧವರ್ತಿ-೧೨ ನಾಡಿನಲ್ಲಿ ಬರುವ ಮುಳಗುಂದ ಗ್ರಾಮವನ್ನು ಈ ಬಸದಿಗೆ ದಾನ ಮಾಡಿದ್ದಾನೆ.

ಪೃಥ್ವಿರಾಮನ ಮೊಮ್ಮಗನಾದ ಶಾಂತಿವರ್ಮನ ಕ್ರಿ.ಶ. ೯೮೧ರ ಸವದತ್ತಿ ಶಾಸನದಲ್ಲಿ "ರಟ್ಟಕುಳಾನ್ವಯನೃಪರುಂ ಪಟ್ಟದತವರ್ಮ್ಮನೆಗಳೆನಿಪ ಗಾವುಂಡುಗಳುಂ ಬಿಟ್ಟರ್ಜ್ಜಿನೇಂದ್ರ ಪೂಜೆಗೆ ನೆಟ್ಟನೆ ಧಾನ್ಯಂಗಳೊಳಗೆ ವೊಂದಿದ ಕುಳಮಂರಟ್ಟರ ಪಟ್ಟಜಿನಾಲಯ ಕ್ಕಿಟ್ಟಳವಾದಯ್ಯ ಕೊಕ್ಕಲಮಮತದಿಂದಂ ಕೊಟ್ಟರ್ಜಿನೆಂದ್ರ ಪೂಜೆಗೆ ನೆಟ್ಟನೆ....... ದೀಪಾವಳಿಯ ಪರ್ವಕ್ಕೆ ದೇವರ ಕೊಡರಿರಿಗೆ ಗಾಣದಲೊಮ್ಮಾನೆಣ್ಣೆ" ಎಂದಿರುವುದರಿಂದ ಪೃಥ್ವಿರಾಮನು ಕ್ರಿ.ಶ. ೮೭೦ರ ಆಸುಪಾಸಿನಲ್ಲಿ ಮೈಳಾಪತೀರ್ಥದಲ್ಲಿ ಕಟ್ಟಿಸಿದ ಜಿನಾಲಯವೇ ಇಂದಿನ ಯಲ್ಲಮ್ಮನ ದೇವಾಲಯ ರಟ್ಟರ ಪಟ್ಟಜಿನಾಲಯವಾಗಿತ್ತೆಂದು ತೋರುತ್ತದೆ.

**. ಪಿಟ್ಟಗ (ಕ್ರಿ.ಶ. ೯೮೧)**

ಕ್ರಿ.ಶ. ೯೮೧ ರಲ್ಲಿ ಸವದತ್ತಿಯ ಶಾಸನದಲ್ಲಿ 'ಮಹಿಯೊಳ್ ಪೃಥ್ವಿರಾಮನನುಪಮ ರೂಪಂ ತತ್ಸುತ ಪಿಟ್ಟಗಂಸಲೆನೆಗಟ್ಟಿಂ' ಎಂದಿರುವುದರಿಂದ[೭] ಪಿಟ್ಟಗನು ಸವದತ್ತಿ ರಟ್ಟರ ಮೊದಲನೆಯ ಶಾಖೆಯ ಪೃಥ್ವಿರಾಮನ ಮಗನೆಂದು ಸ್ಪಷ್ಟವಾಗುತ್ತದೆ. ಪಿಟ್ಟಗನ ರಾಣಿ ನೀಜಿಕಬ್ಬರಸಿ.

ಪೃಥ್ವಿರಾಮನ ನಂತರದಲ್ಲಿ ಇವನ ಮಗ ಪಿಟ್ಟಿಗನು ರಟ್ಟರ ಮೊದಲನೆಯ ಶಾಖೆಯ ರಾಜ್ಯ ಸೂತ್ರಗಳನ್ನು ವಹಿಸಿಕೊಂಡನು.[೮] ಇವನು ಸಮರ್ಥ ರಾಜನಾಗಿದ್ದನು. ಕ್ರಿ.ಶ. ೯೮೧ರ ಸವದತ್ತಿ ಶಾಸನದಲ್ಲಿ

"ಆರೂಢವತ್ಸ ರಾಜನು ।

ದಾರ ಗುಣಂದಿನತಂದುಕಾದಿತ್ಯಂ ಶ್ರೀ ॥

ನಾರೀಕಾನ್ತಂ ನಿರ್ಜ್ಜಿತ ।

ವೈರಿ ಪ್ರಜನೆನಿಸಿದ ಪಿಟ್ಟಿಗಂಸಲೆ ನಿಗಟ್ಟಿಂ ॥"

ಎಂದು ವರ್ಣಿಸಲಾಗಿದೆ. ಕುದುರೆ ಸವಾರಿ ಮಾಡವುದರಲ್ಲಿ ಪರಿಣಿತನೂ, ಮೇಧಾವಿಯೂ, ವತ್ಸರಾಜನ ಸಮಾನನೂ ಆಗಿದ್ದನು. ದಾನ ಧರ್ಮಗಳಲ್ಲಿ, ಆಶ್ರಯ ಬಯಸಿ ಬಂದವರಿಗೆ ಇವನು ಉದಾರ ಹೃದಯದವನಾಗಿದ್ದನು. ಸ್ತ್ರೀಲೋಲುಪನೂ, ವೈರಿಗಳಿಗೆ ಸಿಂಹಸ್ವಪ್ನನೂ ಆಗಿದ್ದನು. ಇವನ ಪರಾಕ್ರಮವನ್ನು ಅದೇ ಶಾಸನದಲ್ಲಿ –

"ಅಂತಕನನ್ತೆಬಂದಿದಿರೊಳಾಂತಜವಮರ್ಮ್ಮನನನೋಡಿ ।

ಸುತ್ತೆ ಮಹಾಶೂರನೇಕರಂತವಿಸಿವಸ್ತು ಗಳಂಮದವಾರಣಗಳಂ ॥

ಕಾನ್ತೆಯರಂತುರಂಗಚಯಮಂಪಿಡಿದಿತ್ತೊಡೆಮೆಚ್ಚಿ ರಾಚಯಂ ।

ದನ್ತಿ ಯನಿತ್ತ ನಂತದುವೆ ಪೇಳವೆ ಪಿಟ್ಟಿಗ ನಿನ್ನ ಗೆಲ್ಲಮಂ ॥

ಎಂದು ವರ್ಣಿಸಲಾಗಿದೆ. ಇವನು ರಾಜ್ಯದ ಮೇಲೆ ದಂಡೆತ್ತಿ ಬರುವ ಎದುರಾಳಿಗಳನ್ನು ನುಚ್ಚುನೂರು ಮಾಡುವ ಪರಾಕ್ರಮಶಾಲಿಯಾಗಿದ್ದನು.

### ೪. ರಾಣಿ ನೀಜಿಯಬ್ಬರಸಿ (ಕ್ರಿ.ಶ. ೯೮೧)

ಕ್ರಿ.ಶ. ೯೮೧ರ ಸವತ್ತಿಯ ಶಾಸನದಲ್ಲಿ "ಪಿಟ್ಟಿಗ ನಿನ್ನ ಗೆಲ್ಲಮಂ । ತದಗ್ರಪತ್ನಿ । ನೀಜಿಕಬ್ಬರಸಿ" ಎಂದಿರುವುದರಿಂದ, ನೀಜಿಕಬ್ಬರಸಿಯು ಪಿಟ್ಟಿಗನ ಹಿರಿಯ ಪತ್ನಿ ಎಂದು ಸ್ಪಷ್ಟವಾಗುತ್ತದೆ. ಪಿಟ್ಟಿಗನಿಗೆ ಇಬ್ಬರೂ ಪತ್ನಿಯರಿದ್ದಂತೆ ತೋರುತ್ತದೆ. ಪಿಟ್ಟಿಗ ಮತ್ತು

ನೀಜಿಯಬ್ಬರಸಿಯರ ಮಗ ಶಾಂತಿವರ್ಮ.[೯] ಇವಳನ್ನು ಕುರಿತು ಸವದತ್ತಿ ಶಾಸನ (ಕ್ರಿ.ಶ. ೯೮೧) ರಲ್ಲಿ –

"ಪೊಗಳಲಳುಂಬವೊಪ್ಪ ಚರಿತಂಮಿಗೆಬಣ್ಣಿಸಲಬ್ಜುಸಂಭವಂ ।
ಗಗಣಿತಮಪ್ಪ ರೂಪವಿಭವಂಪತಿಭಕ್ತಿ ಯೊಳೊಂದಿಸಜ್ಜನಿ ।
ಕ್ಕೆಗೆನೆಲೆಯಾದ ಮಾಂತನದದಿಂಪುಸಮಂತಳವಟ್ಟನೀಜಿಯ ।
ಬ್ಬೆಗೆಗೆಸಂರುನ್ದತಿಪೆಱದ್ವೊರೆಯೆಂದೆರೆ ದೋಷವಲ್ಲದೇ ॥"

ಎಂದು ವರ್ಣಿಸಲಾಗಿದೆ.[೧೦] ಆಕೆ ಅನುಪಮ ಸೌಂದರ್ಯವತಿಯಾಗಿದ್ದಳು. ಪತಿಭಕ್ತಿಯಲ್ಲಿ ಅರುಂಧತಿಯನ್ನು ಮೀರಿಸವಳಾಗಿದ್ದಳು. ಇವಳು ಸಜ್ಜನೆ, ಸರ್ವಗುಣಸಂಪನ್ನೆ, ಸಹೃದಯಿ, ಜಿನಭಕ್ತಿಯಾಗಿದ್ದಳು.

ಸವದತ್ತಿಯ ಶಾಸನದಲ್ಲಿ – "ಮತ್ತಂ ನೀಜಿಯಬ್ಬರಸಿ ತನ್ನ ಮಗಂ ಶಾಂತಿವರ್ಮರಸಂ ಮಾಡಿಸಿದ ಪಿರಿಯ ಬಸದಿಗೆ...." ಎಂದಿರುವುದರಿಂದ, ತನ್ನ ಮಗ ಶಾಂತಿವರ್ಮನು ಸವದತ್ತಿಯಲ್ಲಿ ಕಟ್ಟಿಸಿದ ಹಿರಿಯ ಬಸದಿಗೆ ಯಾಪನೀಯ ಸಂಘದ ಕಾಣೂರು ಗಣದವರಾದ ಬಾಹುಬಲಿ ಭಟ್ಟಾರಕರಿಗೆ ಮುನಿಜನರ ಆಹಾರಕ್ಕಾಗಿ ಹಾಗೂ ಬಸದಿಯ ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ದಾನಮಾಡಿದ್ದಾಳೆ. ಅದರ ಸೀಮೆಯನ್ನು ಶಾಸನದಲ್ಲಿ –

"ತನ್ನ ಸಿವಟಂ ಪಿರಿಯಪಸುಣ್ಡಿಗೆ
ಪೋದ ಬಟ್ಟೆ ಯಿಂತೆಂಕ ಕಾಡಿಯಾರ ಪೊಲದ.....
ನೂಱಿಯ್ಯತ್ತು ಮತ್ತರ್ಕ್ಕೆಯಂ ನಮಸ್ಯಾಮಾಗಿ
ಬಿಟ್ಟಳ್, ಭೂಮಿಯ ಚತುಸ್ಸೀ..... ಕು ಕುಂಬಾಳ
ಪೊಲದ ಸಂದಿನಲೀಶ್ಯಾನ್ಯದ ಗುಡ್ಡೆ । ಅಲ್ಲಿಂ ತೆಂಕ.....
ಕುಂಕುಂಬಾಳ ಸುಗನ್ದವರ್ತ್ತಿಯ ಪೊಲದ ಸನ್ದಿನಲಾ
ಗ್ನೇಯದ ಗುಡ್ಡೆ....... ನೈರಿತಿಯ ಗುಡ್ಡೆ...... ವಾಯುವ್ಯದ ಗುಡ್ಡೆ"

ಎಂದು ಹೇಳಲಾಗಿದೆ. ನೀಜಿಯಬ್ಬರಸಿಯು ಭೂಮಿಯನ್ನು ದಾನ ಮಾಡಿದ ಕಾಲದಲ್ಲಿ ಬಹುಶಃ ಆಕೆಯ ಪತಿ ಪಿಟ್ಟಿಗನು ಕಾಲವಾದಂತೆ ತೋರುತ್ತದೆ.

೫. ಶಾಂತಿವರ್ಮ (ಕ್ರಿ.ಶ. ೯೮೧)

ಕ್ರಿ.ಶ. ೯೮೧ರ ಸವದತ್ತಿಯ ಶಾಸನದಲ್ಲಿ "ಪಿಟ್ಟಗನಿನ್ನಗೆಲ್ಲಮಂ..... ತದಗ್ರಪತ್ನಿ ನೀಜಿಕಬ್ಬರಸಿ...... ತತ್ತನೂಜ ಶಾಂತಿನೃಪಾಳಂ......" ಎಂದು ಹೇಳಲಾಗಿದೆ.[೧೧] ಸವದತ್ತಿ ರಟ್ಟರ ಮೊದಲನೆಯ ಶಾಖೆಯ ಪಿಟ್ಟಗ ಮತ್ತು ಹಿರಿಯ ಪತ್ನಿ ನೀಜಿಕಬ್ಬರಸಿಯರ ಮಗ ಶಾಂತಿವರ್ಮ. ಇವನ ಹಿರಿಯ ಪತ್ನಿ ಚಂದಕಬ್ಬೆ ಎಂದು ಶಾಸನದಿಂದ ಸ್ಪಷ್ಟವಾಗುತ್ತದೆ.

ಶಾಂತಿವರ್ಮನು ಕಲ್ಯಾಣಿ ಚಾಲುಕ್ಯರ ಎರಡನೆಯ ತೈಲಪನ ಮಹಾಸಾಮಂತನಾಗಿ, ಸವದತ್ತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಶಾಂತಿವರ್ಮನ ಸವದತ್ತಿಯ (ಕ್ರಿ.ಶ. ೯೮೧) ಶಾಸನದಲ್ಲಿ-

"ಸಮಧಿಗತಪಂಚಮಹಾಶಬ್ದ ಮಹಾಸಾಮನ್ತಂ ।

ಸಮರವಿಜಯಲಕ್ಷ್ಮೀಕಾನ್ತಂ ಬೈಸಾನ್ವಯ ಸರೋಜವ ।

ನಮಾರ್ತ್ತಾಣ್ಡಂಹಯವತ್ಸ ರಾಜಂ ರೂ ।

ಪಮನೋಜಂಪರಳಸೂಱೆಕಾಱಂ ವೈರಿಬಂಗಾಅಂಸರಸಂ ।

ಭೀಮಚಲದಂಕರಾಮಂಗಣ್ಡ ರಗಣ್ಡಮವೈರಿಭೇರುಣ್ಡ ಪ್ರತಿಪ ।

ನ್ನಮಂದರಂಶರಣಾಗತವಜ್ರಪಂಜರಂಶ್ರೀಮತ್‌ಶಾಂತಿವರ್ಮರಸಂ।"

ಎಂದು ವರ್ಣಿಸಲಾಗಿದೆ. ಇವನು ಪಂಚಮಹಾಶಬ್ದಗಳನ್ನೊಳಗೊಂಡು ಮಹಾಸಾಮಂತನೂ, ಸಮರ ವಿಜಯಲಕ್ಷ್ಮೀಕಾಂತನೂ, ಬೈಸಾನ್ವಯದ ಸರೋವರದಲ್ಲಿಯ ಕಮಲವನ್ನು ಅರಳಿಸುವ ಸೂರ್ಯನೂ ಆಗಿದ್ದನು. ನುಡಿದಂತೆ ನಡೆಯುವವನೂ, ಮಾರ್ತಾಂಡನಿಗೆ ಸಮಾನನೂ ಆಗಿದ್ದನು. ಶಾಂತಿವರ್ಮನು ಕುದುರೆ ಸವಾರಿ ಮಾಡುವುದರಲ್ಲಿ ತಂದೆಯಾದ ಪಿಟ್ಟಗನನ್ನೂ ಮೀರಿಸುವಷ್ಟು ಚತುರನಾಗಿದ್ದನು. ಅತ್ಯಂತ ಸುಂದರಕಾಯನೂ, ಬಲಿಷ್ಠ ತೋಳುಗಳುಳ್ಳವನೂ, ಸ್ತ್ರೀಮೋಹಿತನೂ ಆಗಿದ್ದನು. ಛಲದಲ್ಲಿ ಭೀಮನಂತೆ, ಪರಾಕ್ರಮದಲ್ಲಿ ರಾಮನಂತಿದ್ದನು. ವೈರಿಗಳಿಗೆ ಗಂಡಭೇರುಂಡದಂತೆ ಬಲಿಷ್ಟನೂ, ಶರಣಾಗತರಿಗೆ ವಜ್ರದ ಪಂಜರದಂತೆ ಭದ್ರನೂ ಆಗಿದ್ದನು.

ಇವನ ಸ್ವಭಾವವನ್ನು ಕುರಿತು ಅದೇ ಶಾಸನದಲ್ಲಿ -

"ದಯೆಯಿಂದೊಳ್ಪಿನತೆಳ್ಪಿನಿಂಗುಣಗಣಾಳಂಕಾ ರದಿಂಮಾರ್ಗ್ಗನಿ ।

ರ್ಣಯದಿಂತತ್ವ ವಿಚಾರದಿಂಗಮಕದಿಂದಾಹಾರಭಯಷಜ್ಯ ಸಾ ।
ಭಯಶಾಸ್ತ್ರಮ್ಮಳದಾನದಿಂದಧಿಕನೆಂದರಿದೊಳ್ಪಿ ದಿಂಶಾಂತಿವರ್ಮನವಿಖ್ಯಾ
ತಿಯನೊಂದೆನಾಲಗೆಯೊಳನ್ನೇವಣ್ಣಿಪೆಂಬಣ್ಣಿಪೆಂ.... ।"

ಎಂದು ವರ್ಣಿಸಲಾಗಿದೆ. ಯುದ್ಧ ವೀರನಾದಂತೆ ಹೃದಯದಿಂದ ತುಂಬಾ ದಯಾಪರನಾಗಿದ್ದನು. ಒಳ್ಳೆಯ ಗುಣಗಳಿಂದ ಇವನು ಅಲಂಕೃತನಾಗಿದ್ದನು. ರಾಜನೀತಿ, ಯುದ್ಧನೀತಿ ಹಾಗೂ ಧರ್ಮನೀತಿಗಳಲ್ಲಿ ಇವನೇ ನಿರ್ಣಯ ಕೈಗೊಳ್ಳುತ್ತಿದ್ದನು. ಉನ್ನತ ವಿಚಾರವಂತನೂ, ಗಮಕಿಯೂ, ಸಾಹಿತ್ಯಾಸಕ್ತನೂ ಆಗಿದ್ದಂತೆಯೇ ಉತ್ತಮ ಆಹಾರ ಸೇವಿಸುವವನೂ ಆಗಿದ್ದನು. ಶಾಸ್ತ್ರ ಪಾರಂಗತನೂ, ದಾನಶೂರನೂ, ಇತರರಿಗೆ ಒಳಿತನ್ನು ಮಾಡುವವನಾಗಿದ್ದನು. ಉದಾರ ಹೃದಯವಂತನೂ ಆಗಿದ್ದನು. ಈ ಎಲ್ಲ ಗುಣಗಳನ್ನು ಹೊಂದಿದ ಶಾಂತಿವರ್ಮನನ್ನು ಒಂದೇ ನಾಲಿಗೆಯಿಂದ ಹೊಗಳಲು ಅಸಾಧ್ಯವೆಂದು ಶಾಸನ ಕವಿ ಹೇಳಿಕೊಂಡಿದ್ದಾನೆ.

ಶಾಂತಿವರ್ಮನು ಸುಮಾರು ಕ್ರಿ.ಶ. ೯೮೦ರಲ್ಲಿ ಸುಗಂಧವರ್ತಿಯಲ್ಲಿ ಒಂದು ಜಿನಾಲಯವನ್ನು ಕಟ್ಟಿಸಿದ್ದಾನೆ. ಇವನ ಆಳ್ವಿಕೆ ಕಾಲದ ಶಕವರ್ಷ ೯೦೨ (ಕ್ರಿ.ಶ. ೯೮೦) ರಲ್ಲಿ, ವಿಕ್ರಮ ಸಂವತ್ಸರ ಉತ್ತರಾಯಣ ಸಂಕ್ರಮಣದ ಪೌಶ್ಯ ಶುದ್ಧದಶಮಿಯ ಗುರುವಾರದಂದು ಬಾಹುಬಲಿ ಭಟ್ಟಾರಕರ ಪಾದಗಳಿಗೆ ವಂದಿಸಿ, ಸವದತ್ತಿಯಲ್ಲಿಯ ಮೂರು ನಾರಾ ಐವತ್ತು ಚದುರ ಅಡಿ ಭೂಮಿಯನ್ನು ಜಿನಾಲಯದ ಜೀರ್ಣೋದ್ಧಾರಕ್ಕಾಗಿ ಹಾಗೂ ಮುನಿಜನರ ಆಹಾರಕ್ಕಾಗಿ ದಾನ ಮಾಡಿದ್ದಾನೆ. ಮುಂದೆ ಅದೇ ಶಾಸನದಲ್ಲಿ –

"ತದ್ದರ ಪೊಲದ ಬಡಿಗಿವೊಲದ ಸಂದಿನಲೀಶ್ಯಾನ್ಯದ ಗುಡ್ಡೆ, ಅಲ್ಲಿಂ
ತೆಂಕಲೆಳೆಯಕೆಜ಼ಿಯ ಬಳಿಯ ಕಲ್ಲು, ಅಲ್ಲಿಂ
ಪಡುವಲು ಸಿವಟದ ಸನ್ನಿನೊಳು ನೈರುತಿಯ ಗುಡ್ಡೆ,
ಅಲ್ಲಿಂ ಬಡಗಲು ಸೀವಟ್ಟದ ತದ್ದರಪೊಲದ ಸನ್ದಿನಲು ವಾಯುವ್ಯದ ಗುಡ್ಡೆ"

ಎಂದು ಸೀಮೆಯನ್ನು ಹೇಳಿದೆ. ಶಾಂತಿವರ್ಮನ ತಾಯಿಯಾದ ನೀಜಿಕಬ್ಬರಸಿಯು ತನ್ನ ಮಗ ಕಟ್ಟಿಸಿದ ಹಿರಿಯ ಬಸದಿಗೆ ಭೂಮಿಯನ್ನು ದಾನ ಮಾಡಿದ್ದಾಳೆ.

೬. ನನ್ನ (ಕ್ರಿ.ಶ. ೯೩೦-೯೮೦)

ಇವನನ್ನು ಶಾಸನ ಒಂದರಲ್ಲಿ "ರಟ್ಟವಂಶೋದ್ಭವಃಖ್ಯಾತೋ ನನ್ನ ಭೂಪಸುನಂದನಃ" ಎಂದು ವರ್ಣಿಸಲಾಗಿದೆ. [೧೨] ಇವನು ಸವದತ್ತಿ ರಟ್ಟರ ಎರಡನೆಯ ಶಾಖೆಯ ಮೂಲಪುರುಷನಾಗಿದ್ದನು. [೧೩] ಕ್ರಿ.ಶ. ೯೮೦ರ ಸೊಗಲ ಶಾಸನದಲ್ಲಿ ಇವನನ್ನು ನನ್ನ ನರೇಂದ್ರನೆಂದು ಹಾಗೂ ಕ್ರಿ.ಶ. ೧೦೮೭ರ ಸವದತ್ತಿ ಶಾಸನದಲ್ಲಿ ನನ್ನಭೂಪ ನನ್ನನೃಪಾಳ ಮತ್ತು ನನ್ನಪಯ್ಯ-ರಾಣ ನನ್ನನೃಪ, ನನ್ನನೃಪತಿ ನನ್ನಪಯ್ಯ, ಕಂದೇಯ-ಭಾರತದ ನನ್ನಪಯ್ಯ ಮುಂತಾದ ಹೆಸರಗಳಿಂದ ಕರೆಯಲಾಗಿದೆ. ಇವನ ಒಂದನೆಯ ಕಾರ್ತವೀರ್ಯ. ಇನ್ನಿತರ ವಿವರಗಳು ಅಷ್ಟಾಗಿ ದೊರೆತಿಲ್ಲ.

ಇವನು ಅಹಮಲ್ಲನ ಮಹಾಸಾಮಂತನಾಗಿದ್ದನು. ಇವನು ಕ್ರಿ.ಶ. ೯೩೦-೯೮೦ರ ಸುಮಾರಿನಲ್ಲಿ ಸೊಗಲವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಇವನು ಸಮರ್ಥ ದೊರೆಯಾಗಿದ್ದನು. ಯುದ್ಧ ತಂತ್ರ ಚತುರನಾಗಿದ್ದನು. ಇವನ ಸೌಂದರ್ಯವನ್ನು ಕುರಿತು ಶಾಸನಗಳಲ್ಲಿ-

"ಶ್ರೀರಮಣನತುಳವಿಜಯ ।
ಶ್ರೀರಮಣಂವಿಪುಳವಿಮಳಸಮುದಿತಕೀರ್ತ್ತಿ ।
ಶ್ರೀರಮಣಂಚತುವಚಃ
ಶ್ರೀರಮಣಂನನ್ನ ಭೂಪನನುಪಮ ರೂಪಂ ॥"

ಎಂದು ವರ್ಣಿಸಲಾಗಿದೆ. ಶ್ರೀರಮಣನಂತೆ ಯುದ್ಧ ವಿಜಯಿಯೂ, ಅಪಾರ ಕೀರ್ತಿ ಸಂಪಾದಿಯೂ, ಚತುರನೂ ಆಗಿ ಶ್ರೀರಮಣನೇ ಆದ ನನ್ನ ಭೂಪನು ಅನುಪಮ ಸೌಂದರ್ಯವುಳ್ಳವನಾಗಿದ್ದನು.

ಕ್ರಿ.ಶ. ೧೦೮೭ ಸವದತ್ತಿಯ ಶಾಸನದಲ್ಲಿ ಇವನ ಪರಾಕ್ರಮವನ್ನು -

"ಶ್ರೀವಿಜಯಾಂಗನಾರಮಣನರ್ತ್ತನದಕ್ಷಿಣಬಾಹುವೀರವಿ ।
ದ್ರಾವಣನೂರ್ಜ್ಜಿತಪ್ರಬಳರಟ್ಟಕುಳಾಂಬರತಿಗ್ಮರೋಚಿಲ ।
ಕ್ಷೀವನಿತಾವಿಭಾಸಿಶುಭಲಕ್ಷ ಣಲಕ್ಷ್ಮಿ ಮೂರ್ತ್ತಿವಿಶ್ವ ವಿ ।
ದ್ಯಾವಿನೆನ್ದು ಬಣ್ಣಿಪುದು ನನ್ನನೃಪಾಳನನೀಧರಾತಳಂ ।"

ಎಂದು ವರ್ಣಿಸಲಾಗಿದೆ. ನನ್ನನು ವಿಜಯದ ಒಂದು ಅಂಗವಾಗಿದ್ದನು. ಪರಾಕ್ರಮದಲ್ಲಿ ವಿಷ್ಣುವಿನ ಸಮಾನನೂ, ದಕ್ಷಿಣ ಭಾಗದ ಬಹುಬಳದಲ್ಲಿ ವೀರನೆನಿಸಿಕೊಂಡಿದ್ದನು. ಉನ್ನತ ರಟ್ಟಕುಲದಲ್ಲಿ ಶ್ರೇಯಸ್ಸನ್ನು ತಂದುಕೊಟ್ಟವನೂ, ಉನ್ನತ ಮತಿವಂತನೂ ಆಗಿದ್ದನು. ಭೂಲಕ್ಷ್ಮಿಯನ್ನು ಗಳಿಸುವುದು ಇವನ ಲಕ್ಷಣಗಳಲ್ಲಿ ಒಂದಾಗಿತ್ತು. ಲಕ್ಷ್ಮಿಮೂರ್ತಿಯಂತೆ ವಿಶ್ವವಿಖ್ಯಾತನೂ ಆದ ನನ್ನ ಭೂಪತಿಯನ್ನು ಹೇಗೆ ಹೊಗಳುವುದು ಎಂದು ಶಾಸನ ಕವಿ ಹೇಳಿಕೊಂಡಿದ್ದಾನೆ. ಈ ಭೂಮಿಯಿರುವವರೆಗೂ ಇವನ ಪ್ರಸಿದ್ಧಿಯಿರುತ್ತದೆ ಎಂದು ವರ್ಣಿಸಲಾಗಿದೆ. "ರಟ್ಟವಂಶೋದ್ಭವ; ಖ್ಯಾತೋ" ಎಂದು ಸವದತ್ತಿಯ ಇನ್ನೊಂದು ಶಾಸನದಲ್ಲಿ ಹೊಗಳಲಾಗಿದೆ. ಅದೇ ಶಾಸನದಲ್ಲಿ "ಸಹಸ್ರಬಾಹುರಿವಿಖ್ಯಾತ; ಕಾರ್ತವೀರ್ಯ; ಪ್ರತಾಪಾವಾಸ ಕೂಹುಣ್ಣಿದೇಶ ಯಾಸ್ಯಘಂಟಂ ಸಾದಿಧಿತಂತೇನಭೂಭುಜ" ಎಂದು ವರ್ಣಿಸಲಾಗಿದೆ.

**೭. ಒಂದನೆಯ ಕಾರ್ತವೀರ್ಯ ಕ್ರಿ.ಶ. ೯೮೦**

ಇವನು ಸವದತ್ತಿ ರಟ್ಟರ ಎರಡನೆಯ ಶಾಖೆಯ ಮೂಲಪುರುಷನಾದ ನನ್ನರಸನ ಮಗ. ಕ್ರಿ.ಶ.೧೦೮೭ ಸವದತ್ತಿ ಶಾಸನದಲ್ಲಿ 'ನನ್ನ ಪಾಳನೀ ಧರಾತಳಂ। ಆತನ ತನಯ। ಕಲಿಕತ್ತ ಭೂಜುಜಂ' ಎಂದೂ 'ನನ್ನ ಭೂಪಸ್ಯ ನನ್ದನಃ' ಎಂದು ಹೊಗಳಲಾಗಿದೆ. ಸವದತ್ತಿ ರಟ್ಟರ ಮೂಲಪುರುಷನಾದ ನನ್ನರಸನ. ಒಂದನೆಯ ಕಾರ್ತವೀರ್ಯನೆಂದು ಶಾಸನಾಧಾರಗಳಿಂದ ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಇವನನ್ನು ಕತ್ತ, ಕಲಿಕತ್ತ ಭೂಪ, ವೀರಕತ್ತರಸ, ಕತ್ತಮದೇವ, ಕತ್ತನ ಎಂಬ ಹೆಸರುಗಳಿಂದ ಕರೆಯಲಾಗಿದೆ. ಇವನಿಗೆ ದಾಯಿಮ ಮತ್ತು ೧ನೆಯ ಕನ್ನಕೈರರೆಂಬ–ಇಬ್ಬರು ಮಕ್ಕಳಿದ್ದರು. Iನೆಯ ಕಾರ್ತವೀರ್ಯನು ಕಲ್ಯಾಣಿ ಚಾಲಯಕ್ಯರ ೨ನೆಯ ತೈಲಪನ ಮಹಾಸಾಮಂತನಾಗಿ ಸೊಗಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು.[೧೪] ನಂತರದಲ್ಲಿ ತನ್ನ ರಾಜಧಾನಿಯನ್ನು ಸವದತ್ತಿಗೆ ವರ್ಗಾಯಿಸಿದಂತೆ ತೋರುತ್ತದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಸವದತ್ತಿ ತಾಲೂಕಿನ ಇಂದಿನ ಸೊಗಲವು ಕುಂಡಿ-೩೦೦೦ ಮಂಡಳದ ಸೋಲು-೩೦ ಗ್ರಾಮಗಳನ್ನೊಳಗೊಂಡ ನಾಡಾಗಿತ್ತು. ನಂತರ ಸುಗಂಧವರ್ತಿ-೧೨ಕ್ಕೆ ತನ್ನ ರಾಜಧಾನಿಯನ್ನು ವರ್ಗಾಯಿಸಿದಂತೆ ತೋರುತ್ತದೆ. ಇವನು ಬಲಿಷ್ಠನಾದ ಅರಸನಾಗಿದ್ದನು. ಸವದತ್ತಿ ರಟ್ಟರಸರ ರಾಜ್ಯ ವಿಸ್ತಾರಕ್ಕೆ ಭದ್ರಬುನಾದಿಯನ್ನು ಹಾಕಿ, ಕುಂಡಿ-೩೦೦೦ ಮಂಡಳದ ರೂಪರೇಷೆಯನ್ನು ಹಾಕಿದ್ದಾನೆ. ಕುಹುಂಡಿ ಮಂಡಲವನ್ನಾಳಿದ ಸಮರ್ಥನಾದ ದೊರೆಯೆಂದು ಕ್ರಿ.ಶ. ೯೮೦ ಸೊಗಲ ಶಾಸನ ಸ್ಪಷ್ಟಪಡಿಸಿದೆ.[೧೫] ಇವನನು ಕುರಿತು ಸವದತ್ತಿ ಶಾಸನದಲ್ಲಿ

"ಸ್ಥಿರನುಡಿವಂ ಕಲಿತನೆಯೊ।
ಳ್ಪೊರೆದಾಟಿಜಿಂ ಮುನ್ನಮಿ ರೆವನೆನ್ದಡೆಸಕಳೋ।
ರ್ವ್ವರೋಳ್ ಕತ್ತನ ಸತ್ಯದ।
ದೊರೆಗಂ ಕಾರ್ಯದ ಪೊಗಳ್ಪೆಗಂ ನೋರೇ।"

ಎಂದು ವರ್ಣಿಸಲಾಗಿದೆ. ಮಾತಿನಲ್ಲಿ ಏಕಾಭಿಪ್ರಾಯ ಉಳ್ಳವನೂ, ಸತ್ಯವಾದುದನ್ನು ನುಡಿಯುವ ನುಡಿದಂತೆ ನಡೆಯುವ ವ್ಯಕ್ತಿಯಾಗಿದ್ದನು. "ಸಹಸ್ರ ಬಾಹುರಿವಿಖ್ಯಾತ: ಕಾರ್ತವೀರ್ಯ್ಯ:ಪ್ರತಾಪನೆ" ಎಂದೂ ವರ್ಣಿಸಲಾಗಿದೆ. ಇವನು ಸಾವಿರ ತೋಳುಬಲವುಳ್ಳವನೂ, ಶೌವಂತನೂ ಆಗಿದ್ದನು. ಕ್ರಿ.ಶ. ೧೦೮೭ರ ಸವದತ್ತಿಯ ಶಾಸನದಲ್ಲಿ.-

"ನೆಗಳಿದಕುಹುಣ್ಡಿಮಣ್ಡಳಮನೊನೆಭುಜಾಸಿಯಿನೊತ್ತಿ ಕೊಣ್ಡು ಧಾ।
ತ್ರಿಗೆಪಡಿಚನ್ದಮಾಗಿರಿಪುರಾಜಕಮಂದಮೆಗೊನ್ದುವೀರವೃ॥
ತ್ತಿಗೆನೆಲೆಯಾಗಿ ವೃತ್ತಿಯನನಾಕುಳಮಾಗಿನಿಮಿಳ್ಚೆ ಕೀರ್ತ್ತಿಯಂ।
ಧಗಧಿಪರಿದ್ಧತಾಣದೆಡೆದೆಯ್ದಿಸಿದಂಕಲಿಕತ್ತ ಭಭುಜಂ॥"

ಎಂದು ವರ್ಣಿಸಲಾಗಿದೆ. ಕುಹುಂಡಿ ಮಂಡಳದಲ್ಲಿ ಮಿನಗುವ ನಕ್ಷತ್ರದಂತೆ ಕಾರ್ತವೀರ್ಯನು ವೈರಿ ರಾಜರಿಗೆ ಮಂದಾರ ಪರ್ವತದಂತೆ ಅಚಲನೂ, ವೀರವೃತ್ತಿಯಲ್ಲಿ ಹೆಸರುವಾಸಿಯಾಗಿದ್ದನು. ಇವನು ನೆಲೆಸಿದ ನಾಡು ಕೀರ್ತಿಯಿಂದ ತುಂಬಿಕೊಂಡಿತ್ತು.

ಇವನು ಯುದ್ಧಪ್ರಿಯನಾದಂತೆ ಸತ್ಯಪ್ರಿಯನೂ ಆಗಿದ್ದನು. ಶಾಸನ ಕವಿ ಕಮಳಾದಿತ್ಯನಿಗೆ ಆಶ್ರಯ ನೀಡಿದ್ದನು. ಅವನು ಸೊಗಲ ಶಾಸನವನ್ನು ಕಾವ್ಯಮಯವಾಗಿ ಕವಿ ರಚಿಸಿದ್ದಾನೆ. ಈ ಶಾಸನದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯ ಉಲ್ಲೇಖ ಹಾಗೂ ಬೆಳವಡಿಯ ಕಂಚಿಯಬ್ಬೆಯ ಉಲ್ಲೇಖಗಳಿವೆ. ಇವನು ಸವದತ್ತಿಯಲ್ಲಿ ಪೃಥ್ವಿರಾಮನು ಕಟ್ಟಿಸಿದ ಬಸದಿಗೆ ಭೂಮಿಯನ್ನು ದನ ಮಾಡಿದ್ದಾನೆ.[೧೬]

**೮. ದಾಯಿಮ (ಕ್ರಿ.ಶ. ೧೦೦೦-೧೦೧೫)**

ಶಾಸನಗಳಲ್ಲಿ ಇವನನ್ನು ದಾವರಿ, ದಾಯಿಮ, ದಾಯಿಗ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇವನು ಸವದತ್ತಿ ರಟ್ಟರ ೧ನೆಯ(ಕ್ರಿ.ಶ ೯೭೫-೧೦೦೦) ಕಾರ್ತವೀರ್ಯನ

ಹಿರಿಯ ಮಗ. ದಾಯಿಮನ ತಮ್ಮ ೧ನೆಯ (ಕ್ರಿ.ಶ. ೧೦೧೫-೧೦೩೦) ಕನ್ನಕೈರನೆಂದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಸವದತ್ತಿ ರಟ್ಟರ ೧ನೆಯ ಕಾರ್ತವೀರ್ಯನ ನಂತರ ಅವನ ಮಗ ದಾಯಿಮನು(ಕ್ರಿ.ಶ. ೧೦೦೦) ರಟ್ಟರ ರಾಜ್ಯಸೂತ್ರಗಳನ್ನು ವಹಿಸಿಕೊಂಡು ಸವದತ್ತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕುಹುಂಡಿ ಮಂಡಲವನ್ನು ಆಳುತ್ತಿದ್ದನು. ಇವನು ಸಮರ್ಥ ದೊರೆಯಾಗಿದ್ದನು. ರಟ್ಟರ ರಾಜ್ಯ ವಿಸ್ತಾರದಲ್ಲಿ ಇವನು ಹೆಚ್ಚಿನ ಶ್ರಮ ವಹಿಸಿದ್ದಾನೆಂದು ತಿಳಿದುಬರುತ್ತದೆ. ಸವದತ್ತಿಯ ಶಾಸನ ಒಂದರಲ್ಲಿ "ರಾಜನ್ವತಃ ಪ್ರಜಾಜಾತ ದಾವರಿನಾಮಭೂಭುಜಾ" ಎಂದು ವರ್ಣಿಸಲಾಗಿದೆ. ಇವನು ತನ್ನ ಪ್ರಜೆಗಳನ್ನು ಸಮಾನವಾಗಿ ಕಾಣುತ್ತಿದ್ದನು. ಪ್ರಜೆಗಳಿಗಾಗಿಯೆ ತನು ಎಂಬ ತತ್ವವನ್ನು ಪಾಲಿಸುತ್ತಿದ್ದನು. ಕ್ರಿ.ಶ. ೧೦೮೭ರ ಸವದತ್ತಿಯ ಶಾಸನದಲ್ಲಿ ಇವನ ವ್ಯಕ್ತಿತ್ವವನ್ನು-

"ಮನುನಿಭನೆನ್ದುಶೌರ್ಯನಿಧಿಯೆನ್ದುದಯಾಪರ. . .।
ನೆನ್ದುವಾರಕಾಮಿನಿಗೆಯನೆಜನೆನ್ದು ಬಹುವನ್ದಿ. .।
ಆನಾಶ್ರಯನೆನ್ದುಕೂಡೆಮೇದಿನಿಎಡೆಗೊಣ್ಣು. .
. . ಬಣ್ಣಿಪುದುದಾಯಿಮಭೂಪನನುಗ್ರಕೋಪನಂ॥"

ಎಂದು ವರ್ಣಿಸಲಾಗಿದೆ.[೧೭] ದಾಯಿಮನು ಅಧಿಕ ಶೌರ್ಯದ ನಿಧಿಯಾಗಿದ್ದನು. ಪ್ರಜೆಗಳ ಮೇಲೆ ದಯಾಪರನೂ, ಕಾಮಿನಿಯರಿಗೆ ಪ್ರಿಯಕರನೂ, ಆಶ್ರಯ ಬಯಸಿ ಬಂದ ಜನರಿಗೆ ಆಶ್ಯದಾತನೂ ಇಂತಹ ವ್ಯಕ್ತಿತ್ವವುಳ್ಳ ದಾಯಿಮನು ಅತ್ಯಂತ ಉಗ್ರಸ್ವರೂಪಿಯೂ, ಆಗಿದ್ದನು. ಇವನನ್ನು ವರ್ಣಿಸುವುದು ಅಸಾಮಾನ್ಯವೆಂದು ಶಾಸನ ಕವಿ ಹೇಳಿಕೊಂಡಿದ್ದಾನೆ. ಇದೇ ಶಾಸನದಲ್ಲಿ ಇವನ ಪರಾಕ್ರಮವನ್ನು –

"ವಸುಧಾಭಕ್ರದೊಳೆಂತುಬಣ್ಣಿಸುವುದಂತನ್ನೇಳ್ಗೆತ(ನ್ನಾ)(ಳ್ಕೆ)ತ
ನ್ನೆಸಕತನ್ನ ಪೊಗರ್ತ್ತೆತನ್ನ ವಿಭವಂತನ್ನೋಜೇತನ್ನೂದ್ಧಸಾ. .।
ಹಸಸಂಪನ್ನತೆಯಿಂಧರಾವಳೆಯಮಂನಾನಾವಿಧಂಕೂಡೆಮು. .।
ದ್ರಿಸಿದಂರಟ್ಟರ ಮೇರುಡಾಯಿಮಮಹೀಪಾಳನೃಪಾಳೋತ್ತಮಂ॥"

ಎಂದು ವರ್ಣಿಸಲಾಗಿದೆ. ಈ ಭೂಚಕ್ರದಲ್ಲಿ ಏಜಸ್ಸಿನಿಂದ, ಹೆಗ್ಗಳಿಕೆಯಿಂದ, ರಾಜದರ್ಪದಿಂದ ಆಳುತ್ತ ತನ್ನ ಹಾಗೂ ರಾಜ್ಯದ ಏಳ್ಗೆಗಾಗಿ ದುಡಿಯಲು ಹಿಂಜರಿಯದೇ ಮುಂದೆ ಸಾಗುವ ದಯಿಮನನ್ನು ಹೇಗೆ ಹೊಗಳುವುದು. ಘೋರವಾದ ಯುದ್ಧಗಳನ್ನು ಗೆದ್ದು, ಮಹಾಸಾಹಸಗಳನ್ನು ಮಾಡುವ ತನ್ನ ಪರಾಕ್ರಮದ ಮುದ್ರೆಯನ್ನು ಒತ್ತಿದ್ದಾನೆ. ರಟ್ಟರಸರಲ್ಲಿಯೇ 'ಮೇರು' ಎಂಬ ಪ್ರಶಸ್ತಿಯನ್ನು ಪಡೆದ ಈತ ಮಹೀಪಾಳನೆಂಬ ಬಿರುದನ್ನು ಹೊಂದಿ ಅರಸರಲ್ಲಿಯೇ ಉತ್ತಮನೆನಿಸಿಕೊಂಡಿದ್ದಾನೆ. ಇದರಿಂದ ಇವನು ಭಯಂಕರ ಉಗ್ರನೂ, ಶೂರನೂ, ಧೀರನೂ, ಎಂಬುದು ಸ್ಪಷ್ಟವಾಗುತ್ತದೆ. ರಟ್ಟರ ರಾಜ್ಯವಿಸ್ತಾರದಲ್ಲಿ ದಾಯಿಮನು ಬಹಳ ಶ್ರಮಿಸಿದ್ದಾನೆ. ಇದಕ್ಕಿಂತ ಹೆಚ್ಚಿನ ವಿವರಗಳು ಇವನ ಬಗ್ಗೆ ದೊರೆಯುವುದಿಲ್ಲ

**೯. ಒಂದನೆಯ ಕನ್ನಕೈರ (ಕ್ರಿ.ಶ.೧೦೧೫-೧೦೩೦)**

ಒಂದನೆಯ ಇವನು ಸವದತ್ತಿ ರಟ್ಟರ ನೆಯ ಕಾರ್ತವೀರ್ಯ(ಕ್ರಿ.ಶ.೯೮೦) ನ ಕಿರಿಯ ಮಗ. ಕ್ರಿ.ಶ. ೧೯೮ರ ಸವದತ್ತಿಯ ಶಾಸನದಲ್ಲಿ –

"ಸಹಜಸ್ರಬಾಹುರಿವಖ್ಯಾತ; ಕಾರ್ತವೀರ್ಯ; ಪ್ರತಾಪವಾಸ ಕುಹುಣ್ಡಿದೇಶಯಾಸ್ಯಘಟಂಸಾ–

ಧಿತಂತೇನಭೂಭುಜ ರಾಜನೃತ್ಯಾ:ಪ್ರಜಾಜಾರಂ ದಾವರಿ

ನಾಮಭೂಭುಜಾ ತಸ್ಯಾನುಜಂಪ್ರತಾಪೀನ್ಯಾತ್ ಕನ್ನರ ಕೈರೋಮಹಿಪತಿ:"

ಎಂದು ಹೇಳಲಾಗಿದೆ.[೧೮] ರಟ್ಟ ಅರಸು ಮನೆತನದಲ್ಲಿ ಸಹಜ ಬಾಹುವಿಖ್ಯಾತನೂ, ಪ್ರತಾಪಿಯೂ ಆದ Iನೆಯ ಕಾರ್ತವೀರ್ಯನು ಕುಹುಂಡಿ ಮಂಡಳದ ಸೀಮೆಯನ್ನು ನಿರ್ಧರಿಸಿದನು. ಇವನ ಕಿರಿಯ ಮಗ Iನೆಯ ಕನ್ನ ಕೈರ. ಶಾಸನಗಳಲ್ಲಿ ಇವನನ್ನು ಕನ್ನ, ಕನ್ನ ಕೈರೋ, ಕಲಿಕನ್ನಭೂಪ ಮುಂತಾದ ಹೆಸರುಗಳಿಂದ ಕರೆಯಲಾಗಿದೆ.

ದಾಯಿಮ(ಕ್ರಿ.ಶ.೧೦೦೦-೧೦೧೫) ನ ಆಳ್ವಿಕೆಯ ನಂತರ ಸವದತ್ತಿಯ ರಟ್ಟರ ರಾಜ್ಯ ಸೂತ್ರಗಳನ್ನು ಇವನ ತಮ್ಮನಾದ Iನೆಯ ಕನ್ನಕೈರನು ವಹಿಸಿಕೊಂಡನು. ಇವರ ರಾಜಧಾನಿ ಸವದತ್ತಿಯಗಿತ್ತು.[೧೯]

ಸವದತ್ತಿಯ (ಕ್ರಿ.ಶ.೧೦೮೪) ಶಾಸನದಲ್ಲಿ ಇವನನ್ನು –

"ಸುರಕುಜಮಂಪಳಂಚೆವದೀವಗುಣಂಸಲೆಸಂದವಜ್ರಪಂ।

ಜರಮನನಾತಪಳ್ಳಿವುತಿರ್ಪವು ವ ಗುಣಂಪೀಕ್ಷಿಸ।

ಲ್ಸರಥಯನೆಯ್ದೆಱೊ ಡೀವುದು ತನ್ನ ಗಂಭಿರಗುಣಂಸಮನ್ತು

ಕರಿವೃಡದೇಳ್ಗೆ ಯಂನೆಗೆವುದುದ್ಘ ಗುಣಂಕಲಿಕಕನ್ನ ಭೂಪನ"

ಎಂದು ವರ್ಣಿಸಲಾಗಿದೆ. ರಟ್ಟರಸರಲ್ಲಿ ಶ್ರೇಷ್ಠ ದೊರೆಯಾಗಿದ್ದನು. ಮತ್ತೊಂದು ಶಾಸನದಲ್ಲಿ ಇವನನ್ನು–

"ಕುಳಶೈಳವ್ರಜಮೆರ್ದ್ದುಪಾಟಿ ಗುಮಗಳಾಂಬೋದಿಗಳ್ ಬತ್ತು ಗುಂ।

ತಳಗುರ್ಱ ಂದಿಗ್ಗ ಜಬೃಂದವಿರ್ದ್ದೆಡೆಗಳಿಂಧಾತ್ರೀತಳಂಕೂಡೆ ಸಂ...।

ಚಳಿಕುಂಪಶ್ಚಿಮಶೈಳದಿಂದುದಿಯುಕುಂಮಾರ್ತ್ತಣ್ಡ ನಾ ಕನ್ನಡ ಭೂ...।

ತಳನಾಥರಣಂಗದೊಳ್ಕುಸಿದಡಂ ಶೌಚವ್ರತಂಗೆಟ್ಟಡಂ..."

ಎಂದು ವರ್ಣಿಸಲಾಗಿದೆ. ರಟ್ಟಕುಲದಲ್ಲಿ ಇವನು ವಜ್ರದಂತೆ ಗಟ್ಟಿಗನೂ, ಮಾರ್ತಂಡನೂ, ದಿಗ್ಗಜಗಳ ವೃಂದಗಳಿಗೆ ಅಧಿಕಾರಿಯೂ, ತನ್ನ ಪರಾಕ್ರಮದಿಂದ ಯುದ್ಧಗಳಲ್ಲಿ ಜಯಶಾಲಿಯಾಗುವವನೂ, ಶೌಚವ್ರತವನ್ನು ಪಾಲಿಸುವವನೂ ಆಗಿದ್ದನು. ಇವನು ಬಸದಿಗಳನ್ನು ಕಟ್ಟಿಸಿದ ಬಗ್ಗೆ ದಾಖಲೆಗಳು ದೊರೆಯುವುದಿಲ್ಲ. ಸವದತ್ತಿಯ ಶಾಸನ ಒಂದರಲ್ಲಿ "ದ್ವಾದಶಗ್ರಾಮಾಧಿಷ್ಠಾನಸ್ಯ ಸುಗನ್ಧವರ್ತಿ ಸಮಸಂಬನ್ದಿನಿ ಗ್ರಾಮೇಮುಳುಗುನ್ನಾಖ್ಯೆ ನೇವಷೀಷಣಿ ವರ್ತನಂ ದೇವಸ್ಯ ಚರದತ್ತಂ ನಮಸ್ಯ ಕನ್ನ ಭೂಬುಜಾ" ಎಂದು ಹೇಳಲಾಗಿದೆ. ಇವನು ಸವದತ್ತಿಯ ಜಿನಮಂದಿರಕ್ಕೆ ಭೂಮಿಯನ್ನು ದಾನ ಮಾಡಿದ ಉಲ್ಲೇಖಗಳಿವೆ.

ಇದರಿಂದ ರಟ್ಟರ ಒಂದನೆಯ ಕನ್ನನು ಪರಾಕ್ರಮಿಯೂ, ಜೈನಧರ್ಮ ಪರಿಪಾಲಕನೂ ಆಗಿದ್ದನೆಂದು ಸ್ಪಷ್ಟವಾಗುತ್ತದೆ. ಇವನು ಕ್ರಿ.ಶ. ೧೦೪೦ ರಲ್ಲಿ ಮರಣ ಹೊಂದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. [೨೦] ಕ್ರಿ.ಶ. ೧೦೩೦ರಲ್ಲಿ ಒಂದನೆಯ ಕನ್ನಕೈರನು ಕಾಲವಾದನೆಂದು ಇವನ ಹಿರಿಯ ಮಗ ಎರಗನ ಕ್ರಿ.ಶ. ೧೦೪೦ರ ಮಂಟೂರಿನ ಶಾಸನದಲ್ಲಿ ಹೇಳಲಾಗಿದೆ.

ಕ್ರಿ.ಶ. ೧೦೨೬ರ ಬೆಳವಡಿಯ (ಬೈಲಹೊಂಗಲ ತಾಲೂಕು) ವೀರಭದ್ರ ದೇವಾಲಯದ ಆವರಣದಲ್ಲಿಯ ಶಾಸನದಿಂದ ಕನ್ನಕೈರನು ಅಲ್ಲಿ ಬಸದಿಯನ್ನು ಕಟ್ಟಿಸಿ ಅದರ ಖಂಡಸ್ಫುಟಿತ

ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ದಾನ ಮಾಡಿದ್ದಾಗಿ ತಿಳಿದುಬರುತ್ತದೆ. ಅಲ್ಲಿ ಬೆಳವಡಿಯ ಬಸದಿಯನ್ನು ಸಹಸ್ರ ಕೂಟಜಿನಾಲಯವೆಂದು ಕರೆಯಲಾಗಿದೆ.

ಇವನಿಗೆ ಎರಗ ಮತ್ತು ಅಂಕ ಎಂಬ ಇಬ್ಬರು ಮಕ್ಕಳಿದ್ದುದು ಶಾಸನಗಳಿಂದ ತಿಳಿದುಬರುತ್ತದೆ.

**I. ದಂಡನಾಯಕ ಪಾರಿಸಯ್ಯ (ಕ್ರಿ.ಶ. ೧೦೧೩)**

ಇವನು ಗೋವಾ ಕದಂಬರ ಜಯಕೇಶಿಯ ದಂಡನಾಯಕನಾಗಿದ್ದನು. ಇವನು ಬೆಳಗಾವಿಯ ಕೋಟೆಯಲ್ಲಿ ನೇಮಿನಾಥನ ಒಂದು ಬಸದಿಯನ್ನು ಕ್ರಿ.ಶ. ೧೦೧೩ ರಲ್ಲಿ ಕಟ್ಟಿಸಿದ್ದಾನೆ. ಇವನು ಯಾಪನೀಯ ಸಂಘದವನಾಗಿದ್ದು, ಈ ಬಸದಿಗೆ ಗೋಕಾಕ ತಾಲೂಕಿನ ಕಲ್ಲೊಳೆ ಗ್ರಾಮದ ಭೂಮಿಯನ್ನು ದಾನ ಮಾಡಿದ್ದಾನೆ.[೨೧]

**II. ರಾಜಭೀಮದೇವ (ಕ್ರಿ.ಶ. ೧೦೨೩)**

ಕ್ರಿ.ಶ. ೧೦೨೩ ರಲ್ಲಿ ಬೈಲಹೊಂಗಲ ತಾಲೂಕಿನ ಕಡತನಾಳ ಗ್ರಾಮದ ಒಂದು ಶಿಲಾಶಾಸನದಲ್ಲಿ ಇವನನ್ನು ಮಹಾಮಂಡಳೇಶ್ವರನೆಂದು ಕರೆಯಲಾಗಿದೆ. ಬಾಯಿಸ ವಂಶದ ಅರಸರು ಕ್ರಿ.ಶ. ೮೭೦ ರಲ್ಲಿ ಸವದತ್ತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಇವನೂ ಭೂಮಿಯನ್ನು ದಾನ ಮಾಡಿದ್ದಾನೆ. ಅದರ ವಿವರಗಳು ಅಸ್ಪಷ್ಟವಾಗಿವೆ.[೨೨]

**೧೦. ಎರಗ (ಕ್ರಿ.ಶ.೧೦೪೦)**

ಇವನು ಸವದತ್ತಿ ರಟ್ಟರ ೧ನೆಯ ಕನ್ನಕೈರನ ಹಿರಿಯ ಮಗ. ಇವನನ್ನು ಕುರಿತು ಸವದತ್ತಿಯ ಶಾಸನ ಒಂದರಲ್ಲಿ "ಕನ್ನರಕೈರೋಮಹಿಮತಿ: ತಸ್ಯಾಗ್ರನದ್ದನೋಭಾತಿವಾದ್ಯ ವಿದ್ಯಾ ವಿಧೋಭುವಿ ಎ ಱಗಾಖ್ಯ ಮಹಿಪಃ" ಎಂದು ಹೇಳಲಾಗಿದೆ. ಮುಂದೆ ಅದೇ ಶಾಸನದಲ್ಲಿ "ತದನು ಜೋಸ್ಯಾಙ್ಕಭೂಪತಿಃ" ಎಂದಿರುವುದರಿಂದ ರಟ್ಟರ ಅಂಕನು ಎರಗನ ತಮ್ಮನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಇವನನ್ನು ಎರಗ, ಎರೆಯಮ, ಎರಗಾಖ್ವ, ಎರಗದೇವರಸ, ಎರೆಗ, ಎರೆಯ ಎಂಬ ಹೆಸರುಗಳಿಂದ ಕರೆಯಲಾಗಿದೆ.[೨೩]

ಎರಗನು ತನ್ನ ತಂದೆ ಒಂದನೆಯ ಕನ್ನಕೈರನ (ಕ್ರಿ.ಶ. ೧೦೩೦) ನಂತರ ರಟ್ಟರ ರಾಜ್ಯಸೂತ್ರಗಳನ್ನು ವಹಿಸಿಕೊಂಡನು. ಇವನು ಚಾಲುಕ್ಯರ ೨ನೆಯ ಜಯಸಿಂಹ (ಕ್ರಿ.ಶ. ೧೦೧೮–೧೦೪೨)ನ ಮಹಾಸಾಮಂತನಾಗಿದ್ದನೆಂದು ಕ್ರಿ.ಶ. ೧೦೪೦ ಮಂಟೂರು ಶಿಲಾಶಾಸನದಿಂದ ತಿಳಿದುಬರುತ್ತದೆ. ಇವನು ಒಂದನೆಯ ಜಯಸಿಂಹನ ಆಪ್ತನೂ, ಸ್ನೇಹಿತನೂ ಆಗಿದ್ದಂತೆ

ತೋರುತ್ತದೆ. ಇವನು ತನ್ನ ಆಜ್ಞೆಗಳನ್ನು ಶಿರಸಾವಹಿಸಿ ಪಾಲಿಸುತ್ತಿದ್ದುದರಿಂದ ಎರಗನಿಗೆ ಸಿಂಗನ ಗರುಡ ಎಂಬ ಬಿರುದನ್ನು ನೀಡಿ ಗೌರವಿಸಿದ್ದನು. ಇಂತಹ ಬಿರುದನ್ನು ಪಡೆಯಲು ಎರಗನನ್ನು ಬಿಟ್ಟರೆ ಬೇರೆ ಯಾವ ಮಾಂಡಲಿಕ ರಾಜನಿಂದಲೂ ಸಾಧ್ಯವಿರಲಿಲ್ಲ. ಎರಗನನ್ನು IIನೆಯ ಜಯಸಿಂಹನು ತನ್ನ ಸಮಾನವಾಗಿ ಕಂಡಿದ್ದಾನೆ. ಇವರಿಬ್ಬರೂ ಕೂಡಿಕೊಂಡು ಸಮಾಲೋಚಿಸಿ ದಂಡೆತ್ತಿ ಹೋಗುವ ಹಾಗೂ ಇನ್ನಿತರ ರಾಜಕೀಯ ವಿಚಾರಗಳ ಬಗ್ಗೆ ನಿರ್ಣಯ ಕೈಗೊಳ್ಳುತ್ತಿದ್ದರು.

ಮಹಾಮಾಂಡಲಿಕನಾದ ಚಾಲುಕ್ಯರ ೨ನೆಯ ಜಯಸಿಂಹ ಮತ್ತು ಇವನ ಮಹಾಸಾಮಂತನಾದ ಸವದತ್ತಿ ರಟ್ಟರ ಎರಗ ಇಬ್ಬರೂ ವಿಹಾರದ ಸಮಯದಲ್ಲಿದ್ದಾಗ ಎರಗನ ಮಹಾಪ್ರಧಾನ ಮತ್ತು ದಂಡನಾಯಕ ಕಾಳಿದಾಸರು ಅವರಿಬ್ಬರ ಪ್ರಾಣವನ್ನು ಕಾಪಾಡಿದ್ದಾರೆ.[೨೪] ಎರಗನ ಮಹಾಪ್ರಧಾನವಾದ ಮಾದಿರಾಜ ಮತ್ತು ದಂಡನಾಯಕ ಕಾಳಿದಾಸರ ಉಲ್ಲೇಖಗಳು ರಾಯಭಾಗದ ಶಾಸನದಲ್ಲಿದೆ. ಅದೇ ಶಾಸನದಲ್ಲಿ ಎರಗನು ಮಹಾಪ್ರಧಾನವಾದ ಮಾದಿರಾಜನಿಗೆ ಭೂಮಿಯನ್ನು ದಾನ ಮಾಡಿದ ಉಲ್ಲೇಖ ಬರುತ್ತದೆ.

ಎರಗನು ಮಹಾಶೂರನೂ, ಧೀರನೂ ಆಗಿದ್ದನು. ಸವದತ್ತಿ ರಟ್ಟ ಕುಲವನ್ನು ಬೆಳಗುವ ಸೂರ್ಯನಂತೆ, ವೈರಿ ಸಂಕುಲವನ್ನು ಸುಡುವ ಉಗ್ರ ಸೂರ್ಯನಂತೆ ಇದ್ದನು. ವೈರಿಗಳನ್ನು ಸದೆಬಡಿದು ಸೋಲಿಸಿ ಹಿಮ್ಮೆಟ್ಟಿಸುವಂತಹ ಪರಾಕ್ರಮಶಾಲಿಯಾಗಿದ್ದನು. ಹೀಗೆ ತನ್ನ ರಾಜ್ಯದ ಸೀಮೆಯನ್ನು ವಿಸ್ತರಿಸುತ್ತ, ಅಕ್ಕಪಕ್ಕದ ರಾಜ್ಯಗಳ ಮೇಲೆ ದಂಡೆತ್ತಿ ಅವರನ್ನು ಸೋಲಿಸುತ್ತ ತನ್ನ ರಾಜ್ಯವನ್ನು ವಿಸ್ತರಿಸಿಕೊಳ್ಳುವಲ್ಲಿ ಅತ್ಯಂತ ನಿಪುಣನಾಗಿದ್ದನು. ಹೀಗೆ ಎರಗನು ರಟ್ಟ ಸಾಮ್ರಾಜ್ಯದಲ್ಲಿಯ ಒಬ್ಬ ಸಮರ್ಥ ದೊರೆಯಾಗಿದ್ದನು.

ರಟ್ಟರ ಸಾಮ್ರಾಜ್ಯವನ್ನು ಕಾಪಾಡುವಲ್ಲಿ ಶ್ರಮಿಸಿದ ಎರಗನಿಗೆ ರಟ್ಟ ನಾರಾಯಣ ಎಂಬ ಬಿರುದು ಹೊಂದಿ ಅಕ್ಕಪಕ್ಕ ರಾಜ್ಯಗಳ ಮೇಲೆ ನಿರ್ಭಯದಿಂದ ದಂಡೆತ್ತಿ ಹೋಗಿ ವೈರಿಗಳನ್ನು ಸಂಹರಿಸಿ ರಟ್ಟರ ಮಾರ್ತಾಂಡ ಎಂಬ ಬಿರುದಿಗೆ ಪಾತ್ರನಾಗಿದ್ದಾನೆ. ಚಾಲುಕ್ಯರ IIನೆಯ ಜಯಸಿಂಹನ ಆಪ್ತನಾಗಿ, ಸೇವಕನಾಗಿ, ಅವನ ಕಾರ್ಯಗಳನ್ನು ಮಾಡುತ್ತಿದ್ದ ಎರಗನು ಸಿಂಗನ ವಾಹನದಂತಿದ್ದ ಕಾರಣಕ್ಕಾಗಿ ಜಯಸಿಂಹನು ಸಿಂಗನಗರುಡ ಎಂಬ ಬಿರುದನ್ನು ನೀಡಿ ಗೌರವಿಸಿ, ತನ್ನ ಸಮಾನನಂತೆ ಕಂಡಿದ್ದು ವಿಶೇಷವಾಗಿದೆ.

ಎರಗನು ಯುದ್ಧ ಪ್ರವೀಣನಾದಂತೆಯೆ ಸಂಗೀತ, ಕಲೆಗಳಲ್ಲಿ ಪ್ರವೀಣನೂ ಪ್ರೋತ್ಸಾಹಿಯೂ ಆಗಿದ್ದನು. ಸವದತ್ತಿಯ ಈ ಶಾಸನ ಒಂದರಲ್ಲಿ ಇವನನ್ನು "ವಾದ್ಯವಿದ್ಯಾದೋಭುವಿ ಎಱಗಾಖ್ಯಮಹೀಪಃ" ಎಂದು ವರ್ಣಿಸಲಾಗಿದೆ. ಸವದತ್ತಿಯ ಮತ್ತೊಂದು ಶಾಸನದಲ್ಲಿ –

"ನಿರುಪಮಸಮನ್ತ ಕೆಳೆಯೊ
ಳ್ಸರಸಿಜಭವನೆಸೆವವಾದ್ಯವಿದ್ಯಾಧರನೊ
ಳ್ಸರಸಂಕೇಶ್ವರಂ ಕ
ರ್ಪ್ಸುರಮರ್ಷನ್ದರೆಗೆನೆಗರ್ದ್ದನೆಱಗ ಮಹೀಶಃ"

ಎಂದು ವರ್ಣಿಸಲಾಗಿದೆ. ಎರಗನು ಸಮಸ್ತ ಕಲೆಗಳ ಸವಿಯನ್ನು ಸವಿಯುವವನೂ, ಸಕಲ ವಾದ್ಯ ವಿದ್ಯಾಧರನೂ ಆಗಿದ್ದನು. ತನ್ನ ಕಾಲದ ಪ್ರಸಿದ್ಧ ಕಲಾವಿದನಾದ ಮಧುಸೂದಯ್ಯನಿಗೆ ಭೂಮಿಯನ್ನು ದಾನ ಮಾಡಿದ್ದಾನೆ. ಅದರೊಂದಿಗೆ ಆಧ್ಯಾತ್ಮಿಕ ಏಳ್ಗೆಯನ್ನು ಸಾಧಿಸುವುದು ಅವನ ಗುರಿಯಾಗಿತ್ತು.

ಎರಗನು ಸಂಗೀತ ಕಲಾವಿದನಾಗಿದ್ದಂತೆ ಸಾಹಿತಿಯೂ ಆಗಿದ್ದುದು ಮಂಟೂರಿನ ಶಾಸನದಲ್ಲಿ ಇವನಿಗೆ "ಸರಸ್ವತಿಯ ಕರ್ಣಕುಂಡಲ" ಎಂಬ ಬಿರುದನ್ನು ನೀಡಿ ಗೌರವಿಸಲಾಗಿದೆ. ಇವನು ಅನೇಕ ಕವಿಗಳಿಗೆ ಆಶ್ರಯವನ್ನು ನೀಡಿರಬಹುದಾಗಿದೆ. ಇವನನ್ನು ಕ್ರಿ.ಶ. ೧೦೮೭ರ ಸವದತ್ತಿಯ ಶಾಸನದಲ್ಲಿ –

"ರಸಬೆರ್ದ್ದಾತ್ತಿತಳಂಗುಟ್ಟಿಸುದಕುಳಿಪರೀತೋಪಃಆತಾಂಬುಗಂಭೀ ।
ರಸಮುದ್ರಂ ಚಿತ್ರಪತ್ರಾವಳಿ ದಶದಿಶೆನೀಳ್ದೊಪ್ಪಿಪರ್ವ್ವಿರ್ದ್ದ ರ್ಪ್ಪಾ ।
ಗಸಮಂಮುಟ್ಟಿರ್ದ್ದನೂನನಂಕನಕಗಿರಿಮತ್ತಲ್ಲ ಮಾತಾರಾಕಾಳಿ ।
ಪ್ರಸರಂಚಂದ್ರಾರ್ಕ್ಕವಾಗಲ್ ಪದಮೆರೆಗೆಯಶೋವಲ್ಲ ಪರ್ವ್ವಿತು ಗುರ್ಚ್ಚಂ"

ಎಂದು ವರ್ಣಿಸಲಾಗಿದೆ.[೨೫]

### ೧೧. ದಂಡನಾಯಕ ಮಾದಿರಾಜ (ಕ್ರಿ.ಶ.೧೦೪೦)

ಇವನು ಸವದತ್ತಿ ರಟ್ಟರ ಎರಗನ ದಂಡನಾಯಕನಾಗಿದ್ದನು. ರಾಯಭಾಗದ ಶಾಸನದಲ್ಲಿ–

“ಶ್ರೀಮನ್ ಮಹಾಮಂಡಳೇಶ್ವರನೆರಗದೇವರಸರ್

ಶ್ರೀಮನ್ಮಹಾಪ್ರಧಾನಂ ಮಾದಿರಾಜದಣ್ಣಾಯಕರ್ಗ್ಗೆ”

ಎಂದು ಉಲ್ಲೇಖಿಸಲಾಗಿದೆ. ಸವದತ್ತಿ ರಟ್ಟರ ಎರಗನು ದಂಡನಾಯಕನಿಗೆ ಭೂಮಿಯನ್ನು ಬಸದಿಯ ಪೂಜಾ ವ್ಯವಸ್ಥೆಗೆ ಮತ್ತು ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ದಾನ ಮಾಡಿದ್ದಾನೆ.

**೧೨. ಅಂಕ (ಕ್ರಿ.ಶ.೧೦೪೮)**

ಇವನು ಸವದತ್ತಿ ರಟ್ಟರ ಒಂದನೆಯ ಕನ್ನಕೈರನ ಕಿರಿಯ ಮಗ. ಸವದತ್ತಿಯ ಶಾಸನ ಒಂದರಲ್ಲಿ “ಎಱಗಾಖ್ಯ ಮಹೀಪಃಸ್ಯಾದನು ಜೋಸ್ಯಙ್ಕಭೂಪತಿಃ” ಎಂದು ಹೇಳಿರುವುದರಿಂದ ಅಂಕನು Iನೆಯ ಕನ್ನಕೈರನ ಹಿರಿಯ ಮಗನಾದ ಎರಗನ ತಮ್ಮನಾಗಿದ್ದನೆಂದು ಸ್ಪಷ್ಟವಾಗುತ್ತದೆ. ಇವನ ಪತ್ನಿ ಲಚ್ಚಿಯಬ್ಬರಸಿಯೆಂದು ಹೂಲಿಯ ಕ್ರಿ.ಶ. ೧೦೪೪ರ ಶಾಸನದಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೦೪೪ರ ಹೂಲಿಯ ಶಾಸನದಲ್ಲಿ –

“ಸಕಳಧರಿತ್ರಿಯೊಳ್ನೆಗಳ್ದವಂದಿಜನಂಸತಿರೂಪಿನೇಳ್ಗೆ ಯಂ ।

ಪ್ರಕಟತೆವೆತ್ತ ದಾನಗುಣಮಂಕುಳದುಂವನತಿಯ ಜಿನಾಂಘ್ರಗ ॥

ಳ್ಗೆ ಕುಟಿಳಚಿತ್ತ ಮಂಪೊಗಳುತಿರ್ಪ್ಪುದು ಕೂಂಡಿಯಲಿಂಕ ದಂಕಪಾ ।

ಳಕನ ಕುಳೊತ್ತ ಮಾಂಗನೆಯನರ್ತ್ಥಿಯೆ ಲಚ್ಚಲದೇವಿಯಂಜಗಂ ॥”

ಎಂದು ಹೇಳಿರುವುದರಿಂ ಲಚ್ಚಲದೇವಿಯು ಅಂಕರಸನ ಪತ್ನಿಯಾಗಿದ್ದಳೆಂದು ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಇವನನ್ನು ಅಂಕ, ಅಂಕಮ, ಅಂಕಭೂಪ, ಅಂಕರಸ, ಅಂಕಿದೇವರಸ, ಅಂಕಮಹೀಪ ಎಂಬ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಕ್ರಿ.ಶ. ೧೦೮೭ರ ಸವದತ್ತಿಯ ಶಾಸನ ಒಂದರಲ್ಲಿ ಅಂಕರಸನ ಸೌಂದರ್ಯವನ್ನು ಕುರಿತು –

“ಶ್ರೀಕಾಂನ್ತಂ ವಿಪುಳಯಶಂ ।

ಶ್ರೀಕಾನ್ತಂ ರಟ್ಟವಂಶನೈಸರ್ಗಜಯ ।

ಶ್ರೀಕಾನ್ತ ನಟರಿಪುನೃಪ ।

ಭೂಕ್ತಾ ನಂಕಂನ್ತು ರೂಪನಂಕಮಹೀಪಂ ॥”

ಎಂದು ವರ್ಣಿಸಲಾಗಿದೆ. ಈ ಭೂಮಿ ಒಡೆಯನಾದ ಅಂಕನು ವಿಪುಲ ಯಶಸ್ಸಿನಿಂದ ರಟ್ಟವಂಶಕ್ಕೆ ಕಳಸ ಪ್ರಾಯನಾಗಿದ್ದನು. ಜಯಲಕ್ಷ್ಮಿಯ ಕಾಂತನೂ, ಭೂಲಕ್ಷ್ಮೀಕಾಂತನೂ ಆದ ಅಂಕರಸನು ಮನ್ಮಥನಂತೆ ಸುಂದರ ರೂಪ ಉಳ್ಳವನಾಗಿದ್ದನು.

ಸವದತ್ತಿ ರಟ್ಟರ ಎರಗನ ಮಗ ಒಂದನೆಯ ಸೇನನು ಚಿಕ್ಕವನಾಗಿದ್ದ ಕಾರಣ ರಟ್ಟರ ರಾಜ್ಯಸೂತ್ರಗಳನ್ನು ಅಂಕರಸನು ವಹಿಸಿಕೊಂಡನು. ಇವನ ರಾಜಧಾನಿ ಸವದತ್ತಿಯಾಗಿತ್ತು. ಅಂಕರಸನು ಚಾಲುಕ್ಯರ ಒಂದನೆಯ ಸೋಮೇಶ್ವರನ ಪಂಚಮಹಾಶಬ್ದ ಮಹಾಸಾಮಂತನಾಗಿದ್ದನು. ಅಂಕರಸನು ಯುದ್ಧ ಪರಾಕ್ರಮಿಯಾಗಿದ್ದನು. ಇವನು ಮಹಾಛಲವಾದಿಯಾಗಿದ್ದನೆನ್ನುವುದನ್ನು ಕ್ರಿ.ಶ. ೧೦೮೭ರ ಸವದತ್ತಿ ಶಾಸನದಲ್ಲಿ ಇವನ ಶೌರ್ಯವನ್ನು ಹೇಗೆ ವರ್ಣಿಸಲಾಗಿದೆ. ಹೋರಾಟದಲ್ಲಿ ಅತ್ಯಂತ ಶೂರನೂ, ಧೀರನೂ ಆದ ಅಂಕರಸನು ರಾಹುವನ್ನು ಮೀರಿಸಿದವನೂ, ಅಗ್ನಿಯಂತೆ ಭಯಂಕರನೂ, ಸಮುದ್ರದಂತೆ ಭಯಂಕರನೂ, ಮುಳುಗದ ಸೂರ್ಯನಂತೆ ಪ್ರಭಾವಿಯೂ, ಉಗ್ರರಲ್ಲಿ ಉಗ್ರನೂ, ಅನುಪಮ ಶೌರ್ಯವಂತನೂ ಆಗಿದ್ದನು.

ಸವದತ್ತಿ ಶಾಸನದಲ್ಲಿ ಅಂಕನನ್ನು ಪಂಚಮಹಾಸಾಮನ್ತಂ, ನಿಜಭುಜೋಪಾರ್ಜ್ಜಿತನ್, ವಿಜಯಲಕ್ಷ್ಮೀಕಾನ್ತ ಸಾಹಸಕೌನ್ತೇಯ, ಲತ್ತ ಲೂರ್ಪ್ಪುರವರಾಧೀಶ್ವರಂ, ಕದನಮಹೇಶ್ವರಂ, ವೀರಕಾಂತಾವಿಭೂಸೆನ್ದೂ ರಲಾಂಚ್ಛನಂ, ಸುವರ್ಣ್ಣಗರುಡಧ್ವ ಜಳಿಕಾವಿರಾಜಕಲಾಂಚ್ಛನಂ ರಟ್ಟವಂಶಾವತಾರಂ ರಣರಂಗಶೂದ್ರಕಂವೀರಾವತಾರಂ ಪಡಿಬಲದಣುವನಣ್ಣ ನಂಕಕಾಱಂ ಎಂಬ ಬಿರುದುಗಳಿಂದ ವರ್ಣಿಸಲಾಗಿದೆ. ಇವೆಲ್ಲವುಗಳಿಂದ ಅಂಕರಸನು ರಟ್ಟರಲ್ಲಿ ಅತ್ಯಂತ ಪ್ರಭಾವಿಯಾದ ಅರಸನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.

ಅಂಕರಸನು ಕ್ರಿ.ಶ. ೧೦೪೮ರ ಸುಮಾರಿನಲ್ಲಿ ತನ್ನ ರಾಜಧಾನಿಯಾದ ಸವದತ್ತಿಯಲ್ಲಿ ಅಂಕೇಶ್ವರ ದೇವಾಲಯವನ್ನು ಕಟ್ಟಿಸಿ, ಅದರ ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ದಾನ ಮಾಡಿದ್ದಾನೆ. ಅಲ್ಲದೆ ಸಾಹಿತ್ಯಕ್ಕೂ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದಾನೆ. ಅಥಣಿ ತಾಲೂಕಿನ ಕೊಕಟನೂರದಲ್ಲಿರುವ ವಿದ್ಯಾಕೇಂದ್ರವನ್ನು ನಡೆಸಲು ಭೂಮಿ ದಾನ ಮಾಡಿದ್ದಾನೆ.

ಇವನ ಕಾಲದಲ್ಲಿ ಸವದತ್ತಿಯ ಅಂಕೇಶ್ವರ ದೇವಾಲಯದ ಶಾಸನ ಮತ್ತು ಉಳ್ಳಾಗಡ್ಡಿ ಖಾನಾಪೂರದ ಶಾಸನಗಳು ಮಾತ್ರ ಉಪಲಬ್ಧವಾಗಿವೆ. ಈ ಶಾಸನಗಳು ದೇಶಿಯ ಗಣಕ್ಕೆ ಸಂಬಂಧಿಸಿದ್ದಾಗಿವೆ.

### ರಾಣಿ ಲಚ್ಚಬ್ಬರಸಿ (ಕ್ರಿ.ಶ. ೧೦೪೪)

ಈಕೆಯು ಸವದತ್ತಿ ರಟ್ಟರ ಅಂಕರಸನ ಪತ್ನಿಯಾಗಿದ್ದಳು. ಇವಳ ತಂದೆ ಹೂಲಿಯ ಒಡೆಯನಾದ ಪಾಯಿಮನೃಪ, ತಾಯಿ ಹಮ್ಮಿಕಬ್ಬೆ. ಹೂಲಿಯ ಶಾಸನದಲ್ಲಿ ಈಕೆಯನ್ನು ಕುರಿತು ಹೇಗೆ ವರ್ಣಿಸಲಾಗಿದೆ. ಈ ಭುವಿಯಲ್ಲಿ ಸಕಲ ಜನರಿಂದ ವರ್ಣಿತಳೂ, ಸಕಲಗುಣ ಸಂಪನ್ನೆಯೂ, ದಾನವಂತೆಯೂ ಆದ ಲಚ್ಚಲದೇವಿಯು ಕುಹುಂಡಿಮಂಡಲದ ಒಡೆಯನಾದ ಅಂಕರಸನನ್ನು ಮದುವೆಯಾಗಿದ್ದಳೆಂದು ಸ್ಪಷ್ಟವಾಗುತ್ತದೆ. ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತನಾದ ಅಂಕನು ಸವದತ್ತಿ ರಟ್ಟರ ಅಂಕರಸನಾಗಿದ್ದಾನೆ. ಕ್ರಿ.ಶ. ೧೦೪೪ರ ಸುಮಾರಿನಲ್ಲಿ ಕುಹುಂಡಿಮಂಡಲವು ಸವದತ್ತಿ ರಟ್ಟರ ಆಧೀನದಲ್ಲಿತ್ತು. ಈ ಸವದತ್ತಿ ರಟ್ಟರ ಅಂಕರಸನು ಕ್ರಿ.ಶ. ೧೦೪೪ರ ಸುಮಾರಿನಲ್ಲಿದ್ದ ಚಾಲುಕ್ಯ ಒಂದನೆಯ ಸೋಮೇಶ್ವರನ ಸಾಮಂತನಾಗಿದ್ದನು[೬೬] ಹಾಗೂ ಲಚ್ಚಬ್ಬರಸಿಯನ್ನು ವರ್ಣಿಸುವ ಶಾಸನವೂ ಕೂಡ ಚಾಲುಕ್ಯರ ಒಂದನೆಯ ಸೋಮೇಶ್ವರನ ಕಾಲದ್ದಾಗಿದೆ. ಇದರಿಂದ ಅಂಕರಸನ ಹೆಂಡತಿ ಎಂದು ಸ್ಪಷ್ಟವಾಗುತ್ತದೆ. ಇವಳು ಕ್ರಿ.ಶ. ೧೦೪೪ ರಲ್ಲಿ  ಹೂಲಿಯಲ್ಲಿ ಒಂದು ಬಸದಿಯನ್ನು ಕಟ್ಟಿಸಿದ್ದಾಳೆ.

### ೧೩. ಒಂದನೆಯ ಸೇನ (ಕ್ರಿ.ಶ. ೧೦ನೇ ಶತಮಾನ)

ಇವನು ಸವದತ್ತಿ ರಟ್ಟರ ಎರಗನ ಮಗ. ಕ್ರಿ.ಶ. ೮೭೫ರ ಸವದತ್ತಿಯ ಶಾಸನದಲ್ಲಿ–

"ಏಱಗಾಖ್ಯಮಹೀಪಣ। ವಾದ್ಯವಿದ್ಯಾಧರಸ್ಯಾಗ್ರಸೂನುಃ ಶ್ರೀಸೇನಭೂಪತಿ" ಎಂದು ಹೇಳಿರುವುದರಿಂದ ಒಂದನೆಯ ಸೇನನು ಎರಗನ ಹಿರಿಯ ಮಗನೆಂದು ಸ್ಪಷ್ಟವಾಗುತ್ತದೆ. ಅದೇ ಶಾಸನದಲ್ಲಿ, "ಶ್ರೀಸೇನ ಭೂಪತಿಸ್ತಸ್ಯಾಗ್ರಮಹಿಷೀ ಜಾತಾಮ್ಮೈಳಲಾದೇವಿರೂರ್ಜ್ಜಿತಾ" ಎಂದಿರುವುದರಿಂದ ಒಂದನೆಯ ಸೇನನ ಹಿರಿಯ ಪತ್ನಿ ಮೈಳಲಾದೇವಿಯೆಂದು ಸ್ಪಷ್ಟವಾಗುತ್ತದೆ.

ಶಾಸನಗಳಲ್ಲಿ ಇವನನ್ನು ಸೇನ, ಶ್ರೀಸೇನ, ಸೇನಭೂಪಾ, ಸೇನಭೂಪತಿ, ಶ್ರೀಸೇನ ಭೂಪಾಳ, ಶ್ರೀಕಾಳಸೇನ ಎಂಬ ಹೆಸರುಗಳಿಂದ ಗುರುತಿಸಲಾಗಿದೆ.

ಸವದತ್ತಿ ರಟ್ಟರ ಎರಗನ ಮರಣ ಸಮಯದಲ್ಲಿ ಅವನ ಮಗ ಒಂದನೆಯ ಸೇನನು ಚಿಕ್ಕವನಿದ್ದ ಕಾರಣ ಸೇನನ ಚಿಕ್ಕಪ್ಪನಾದ ಅಂಕನು ರಾಜ್ಯ ಸೂತ್ರಗಳನ್ನು ವಹಿಸಿಕೊಂಡನು. ಇವನ ಚಿಕ್ಕಪ್ಪನಾದ ಅಂಕರಸನ ಆಳ್ವಿಕೆಯ ನಂತರದಲ್ಲಿ ಒಂದನೆಯ ಸೇನನು ರಟ್ಟರ ರಾಜ್ಯ ಸೂತ್ರಗಳನ್ನು ವಹಿಸಿಕೊಂಡನು.

ಒಂದನೆಯ ಸೇನನು ಚಾಲುಕ್ಯರ ಎರಡನೆಯ ವಿಕ್ರಮಾದಿತ್ಯನ ಮಹಾಸಾಮಂತನಾಗಿದ್ದನು. ಸವದತ್ತಿಯು ಇವನ ರಾಜಧಾನಿಯಾಗಿತ್ತು. ಇವನು ಅತ್ಯಂತ ಪರಾಕ್ರಮಿಯಾದ ರಾಜನಾಗಿದ್ದನು. ಕ್ರಿ.ಶ. ೧೦೬೮ರ ಸವದತ್ತಿಯ ಶಾಸನದಲ್ಲಿ-

"ಅಸುಹೃದ್ಭೂಪತಿತೋಚೆತಪ್ಪದವಿರಾಂಗನ್ನಾ ಲಿಂಗನೊ ।
ಲ್ಲಸಿತಾಂಗಂಹರಹಾಸಕಾಶಶಶಿಕಾನ್ತಾ ಕಾಶಗಂಗಾಳಜಳ ।
ಪ್ರಸರಮೋಘದಿಗಂತಕೀರ್ತಿಘನಪ್ರದ್ಯೋತಸನ್ಮೂರ್ತಿಸಂ... ।
ದಸುಜದ್ಗುಣದೀಪವರ್ತ್ತಿನೆಗರ್ದಂ ಶ್ರೀಸೇನಭೂಪಾಳಕ ।"

ಎಂದು ವರ್ಣಿಸಲಾಗಿದೆ. ಇವನು ಅತ್ಯಂತ ಶೂರನೂ, ಧೀರನೂ, ವೀರತ್ವವನ್ನು ಆಲಿಂಗಿಸಿದವನೂ ಆಗಿದ್ದನು. ಆಕಾಶದಲ್ಲಿ ಬೆಳಗುವ ಸೂರ್ಯನಂತೆ ಪ್ರಭಾವಿಯೂ, ಆಕಾಶಗಗೆಯಂತೆ ಎಲ್ಲೆಡೆಗೆ ಪಸರಿಸಿದವನೂ, ದಿಕ್ ದಿಗಂತಕ್ಕೂ ಕೀರ್ತಿಯನ್ನು ಹಬ್ಬಿಸಿದವನೂ, ಸದ್ಗುಣ ಸಂಪನ್ನನೂ ಆಗಿ ಬೆಳಕನ್ನು ಚೆಲ್ಲುವವನೂ ಆದ ಶ್ರೀಸೇನಭೂಪಾಳನು ಕೀರ್ತಿವಂತನಾಗಿದ್ದನೆಂದು ಶಾಸನ ಕವಿಯು ಇವನನ್ನು ಮಾರ್ಮಿಕವಾಗಿ ವರ್ಣಿಸಿದ್ದಾನೆ.

ಇವನನ್ನು ಕ್ರಿ.ಶ. ೯೭೬ರ ಸವದತ್ತಿಯ ಶಾಸನ "ವಾದ್ಯ ವಿದ್ಯಾಧರ" ಎಂದು ವರ್ಣಿಸಿದೆ. ಒಂದನೆಯ ಸೇನನು ಸಂಗೀತ ಪ್ರಿಯನಾಗಿದ್ದುದು ಇದರಿಂದ ಸ್ಪಷ್ಟವಾಗುತ್ತದೆ. ಮೇಲಿನ ಬಿರುದನ್ನು ಗಮನಿಸಿದರೆ ಸ್ವತಃ ಅವನೇ ವಾದ್ಯ ನುಡಿಸುತ್ತಿದ್ದಂತೆ ಹಾಗೂ ಸಾಹಿತ್ಯ ಕೃತಿಯನ್ನು ರಚಿಸಿದಂತೆ ಭಾಸವಾಗುತ್ತದೆ. ಆದರೆ ಅವನ ಬಗ್ಗೆ ಸರಿಯಾದ ಆಧಾರಗಳು ವಿರಳವಾಗಿವೆ. ಕ್ರಿ.ಶ. ೯೭೬ರ ಸವದತ್ತಿಯ ಶಾಸನದಲ್ಲಿ "ಸುಗನ್ಧವರ್ತ್ಯಾಹ್ವಕೇಗ್ರಾಮೇಧರ್ಮಜ್ಞ ಜನತಾವೃತೆ ಶ್ರೀಕಾಳಸೇನಭೂಪೇನ ಕಾರಿತಂ ಜಿನಮನ್ದಿರಂ। ನಿವರ್ತಂ ದ್ವಾದ ಶಂಶತಸ್ಮೈ । ಜಿನಗೇಹಾಯಭಕ್ತಿತಃ ಬ್ರಹದ್ದಣ್ಡೇನ ಸಂದತ್ತಂ ನಸ್ಯಂ ಸೇನಭೂಭುಜಾ॥" ಎಂದಿರುವುದರಿಂದ ರಟ್ಟರ ಒಂದನೆಯ ಕಾಳಸೇನನು ಸವದತ್ತಿಯಲ್ಲಿ ಒಂದು ಬಸದಿಯನ್ನು ಕಟ್ಟಿಸಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಇವನು ಕಟ್ಟಿಸಿದ ಈ ಬಸದಿಗೆ ಇವನ ಮೊಮ್ಮಗನಾದ ಎರಡನೆಯ ಸೇನ ಭೂಪನು ಹನ್ನೆರಡು ನಿವರ್ತನ ಭೂಮಿಯನ್ನು ದಾನ ಮಾಡಿದ್ದಾನೆ. ಮುಂದೇ ಅದೇ ಶಾಸನದಲ್ಲಿ-

"ಶ್ರೀಸೇನಭೂಪತಿಸ್ತಸ್ಯಾಗ್ರ ಮಹಿಷೀಜಾತಾ ಮೈಟಿಲಾದೇವಿರೂರ್ಜ್ಜಿತಾ । ಶ್ರೀಕಾಳ ಸೇನಭೂಪಸ್ಯ ತಸ್ಯಾಸೀದಗ್ರನನ್ದನಃ ಕನ್ನಕೈರನೃಪಃಕ್ಯಾತೋ"

ಎಂದಿರುವುದರಿಂದ ಒಂದನೆಯ ಸೇನನಿಗೆ ಕಾಳಸೇನ ಎಂಬ ಮತ್ತೊಂದು ಹೆಸರಿತ್ತೆಂದೂ ಇವನ ಹಿರಿಯ ಮಗ ಎರಡನೆಯ ಕನ್ನಕೈರನೆಂದೂ ಸ್ಪಷ್ಟವಾಗುತ್ತದೆ. ಒಂದನೆಯ ಸೇನನು ಸವದತ್ತಿಯಲ್ಲಿ ಕಟ್ಟಿಸಿದ ಬಸದಿಗೆ ಎರಡನೆಯ ಕನ್ನಕೈರ, ಇವನ ಮಗ ಎರಡನೆಯ ಕಾರ್ತವೀರ್ಯ, ಇವನ ಮಗ ಎರಡನೆಯ ಸೇನ ಮತ್ತು ಶ್ರೀವೀರ ಪೆರ್ಮಾಡಿದೇವ (ವಿಕ್ರಮಾದಿತ್ಯ ಎರಡನೆಯ) ಮುಂತಾದವರು ಭೂಮಿಯನ್ನು ದಾನ ಮಾಡಿದ್ದಾರೆ. ಎರಡನೆಯ ಕನ್ನಕೈರನು ತನ್ನ ಗುರು, ಸಕಲಶಾಸ್ತ್ರ ಪಾರಂಗತರೂ, ಸಿದ್ಧಾಂತ ದೇವರೆಂಬ ಬಿರುದಾಂಕಿತರೂ ಆದ ಕನಕಪ್ರಭರಿಗೆ ಭೂಮಿದಾನವನ್ನು ಒಪ್ಪಿಸಿದ್ದಾನೆ.

ಹೀಗೆ ಒಂದನೆಯ ಸೇನನು ರಾಜ್ಯ ವಿಸ್ತಾರದಿಂದ ಸಾಹಿತ್ಯ, ಸಂಗೀತ, ಧಾರ್ಮಿಕ ವಿಚಾರಗಳಿಂದ ಹಾಗೂ ಬಸದಿಗಳನ್ನು ಕಟ್ಟಿಸುವುದರಿಂದ ತನ್ನ ಹೆಸರನ್ನು ರಟ್ಟ ಸಾಮ್ರಾಜ್ಯದಲ್ಲಿ ಶಾಶ್ವತಗೊಳಿಸಿದ್ದಾನೆ. ಇವನು ಕ್ರಿ.ಶ. ೧೦೬೮ ರಲ್ಲಿ ಮರಣ ಹೊಂದಿದನು.

ಒಂದನೆಯ ಸೇನ ಮತ್ತು ಮೈಳಲಾದೇವಿಯರಿಗೆ ಅರಿಭೂಪಾಳ, ಕನ್ನಕೈರ(ಎರಡನೆಯ) ಮತ್ತು ಕಾರ್ತ್ತವೀರ್ಯ(ಎರಡನೆಯ) ಎಂಬ ಮೂರು ಜನ ಮಕ್ಕಳಿದ್ದರು.

**೧೪. ಅರಿಭೂಪಾಳ (ಕ್ರಿ.ಶ. ೧೦೬೮)**

ಕ್ರಿ.ಶ. ೧೦೬೮ರ ಸವದತ್ತಿ ಶಾಸನದಲ್ಲಿ "ಶ್ರೀಸೇನಭೂಪಾಳಕ । ತ್ತನಯ । ಅರಿಭೂಪಾಳ್" ಎಂದೂ ಕ್ರಿ.ಶ. ೧೦೮೭ರ ಸವದತ್ತಿಯ ಮತ್ತೊಂದು ಶಾಸನದಲ್ಲಿ "ಮಹಾಸಾಮನ್ತನೆಱೆಗ ಭೂಪಾಳಾತ್ಮ ಜಂ । ಅರಿಭೂಪಾಳ" ಎಂದೂ ಹೇಳಿರುವುದರಿಂದ ಸವದತ್ತಿ ರಟ್ಟರ ಎರಗನ ಮಗ ಅರಿಭೂಪಾಳನೆಂದು ಸ್ಪಷ್ಟವಾಗುತ್ತದೆ.

ಶಾಸನಗಳಲ್ಲಿ ಇವನನ್ನು ಅರಿ, ಅರಿಭೂಪಾಳ, ಅರಿಭೂಪ, ಎಂಬ ಹೆಸರುಗಳಿಂದ ಕರೆಯಲಾಗಿದೆ. ಅರಿಭೂಪಾಲನು ಯಾರ ಸಾಮಂತನಾಗಿದ್ದನೆಂಬುದಕ್ಕೆ ಆಧಾರಗಳು ದೊರೆಯುವುದಿಲ್ಲ. ಕ್ರಿ.ಶ. ೧೦೬೮ರ ಸವದತ್ತಿ ಶಾಸನದಲ್ಲಿ –

"ಅರಿಭೂಪಾಳಕೃತಾಂತನುದ್ದತರಿಪುಕ್ಷ್ಮಾ ಪಾಳಸನ್ದೋಹಭೀ

ಕರಕಾಳಾನಳ್ನ ನುನ್ನೆ ...................... ತದಪ್ಪ ಭಯಂ
ಕರವಿದ್ವದ್ಮಹಿಪಾಳ ಮೇಘಾಲಯಕಾಳೋತ್ಸಾ ವಾತಂಕ್ಷಿ ಲೇ
ಶ್ವರ ಚೂಡಾಮಣಿ .........................................."

ಎಂದು ಹೇಳಿರುವುದರಿಂದ ಅರಿಭೂಪಾಳನು ಒಬ್ಬ ವೀರನೂ, ಧೀರನೂ, ರಟ್ಟವಂಶ ಉದ್ಧಾರಕನೂ, ಭೀಕರ ಕಾಳಗಗಳಲ್ಲಿ ಹೋರಾಡುವವನೂ, ಕಪ್ಪು ಮೋಡಗಳಂತೆ ಉತ್ಸಾಹಿತನೂ, ಭೂಮೀಶ್ವರನೂ, ಕೀರ್ತಿ ಎಂಬ ವನಿತೆಯನ್ನು ವರಿಸಿದವನೂ, ಶ್ರೀರಮಣನೂ ಆಗಿದ್ದನೆಂದು ತಿಳಿದು ಬರುತ್ತದೆ. ಇವನ ಆಳ್ವಿಕೆ ಕಾಲದ ಶಾಸನಗಳಾವೂ ಇಲ್ಲಿಯವರೆಗೆ ಉಪಲಬ್ಧವಾಗಿಲ್ಲದ ಕಾರಣ ಇವನ ಬಗ್ಗೆ ಹೆಚ್ಚಿನ ಮಾಹಿತಿ ಉಪಲಬ್ಧವಾಗಿಲ್ಲ.

**೧೫. ಎರಡನೆಯ ಕನ್ನಕೈರ (ಕ್ರಿ.ಶ. ೧೦೮೮)**

ಸವದತ್ತಿ ರಟ್ಟರ ಒಂದನೆಯ ಸೇನನ ಹಿರಿಯ ಮಗ ಎರಡನೆಯ ಕನ್ನಕೈರ. ಇವನಿಗೆ ಅರಿಭೂಪಾಳ ಮತ್ತು ಇಮ್ಮಡಿ ಕಾರ್ತವೀರ್ಯರೆಂಬ ಇಬ್ಬರು ತಮ್ಮಂದಿರಿದ್ದರೆಂದು ಕ್ರಿ.ಶ. ೧೦೮೭ರ ಸವದತ್ತಿಯ ಶಾಸನದಿಂದ ಸ್ಪಷ್ಟವಾಗುತ್ತದೆ. ಕ್ರಿ.ಶ. ೮೭೬ರ ಸವದತ್ತಿ ಶಾಸನದಲ್ಲಿ "ಶ್ರೀ ಸೇನಭೂಪತಿ ಸ್ತನ್ಯಾಗ್ರ ಮಹಿಷೀಜಾತಾ ಮೈಲಲದೇವಿರೂರ್ಜ್ಯಿತಾ" ಎಂದಿರುವುದರಿಂದ ಒಂದನೆಯ ಸೇನನ ಹಿರಿಯ ಪತ್ನಿ ಮೈಳಲಾದೇವಿಯೆಂದು ಸ್ಪಷ್ಟವಾಗುತ್ತದೆ.

ಶಾಸನಗಳಲ್ಲಿ ಇವನನ್ನು ಕನ್ನ ಶ್ರೀಕನ್ನ, ಶ್ರೀಕನ್ನ ಭೂಪಾಳಕ, ಕನ್ನಕೈರ, ಕನ್ನಕೈರನೃಪಃ ಎಂಬ ಹೆಸರುಗಳಿಂದ ಕರೆಯಲಾಗಿದೆ.

ಒಂದನೆಯ ಸೇನನ (ಕ್ರಿ.ಶ. ೧೦೬೮) ಮರಣಾ ನಂತರ ಇವನ ಮಗ ಇಮ್ಮಡಿ ಕನ್ನಕೈರನು ಸವದತ್ತಿ ರಟ್ಟರ ರಾಜ್ಯಸೂತ್ರಗಳನ್ನು ವಹಿಸಿಕೊಂಡನು. ಇವನು ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನು.[೨೭] ಇಮ್ಮಡಿ ಕನ್ನಕೈರನು ಯುದ್ಧ ಪ್ರವೀಣನೂ, ಯೋಧನೂ ಆಗಿದ್ದನು. ಇವನು ಲಾಟರ ಮೇಲೆ ದಂಡೆತ್ತಿ ಹೋದಾಗ ಇವನ ಶೌರ್ಯ ಪರಾಕ್ರಮಗಳಿಗೆ ಮೆಚ್ಚಿ ಲಾಟರು ತಮ್ಮ ರಾಜಕುಮಾರಿಯನ್ನು ವಿವಾಹ ಮಾಡಿಕೊಟ್ಟರು.

ಮಹಾಮಂಡಲೇಶ್ವರನೆಂಬ ಬಿರುದನ್ನು ಪಡೆದ ಕನ್ನಕೈರನು ಸವದತ್ತಿ ರಟ್ಟರಸರಲ್ಲಿ ಗುರುತಿಸುವಂತಹ ಅರಸನಾಗಿದ್ದನು. ಕ್ರಿ.ಶ. ೧೦೮೨ ರಿಂದ ೧೦೮೭ರ ಇವನ ಅವಧಿಯು ಸುವರ್ಣಯುಗವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೨೮] ಕ್ರಿ.ಶ. ೧೦೮೭ರ ಸವದತ್ತಿ

ಶಾಸನದಲ್ಲಿ "ಕ್ರೀತೀಶ್ವರ ಚೂಡಾಮಣಿ ರಟ್ಟವಂಶತಿಳಕಂ ಶ್ರೀಕನ್ನಭೂಪಾಳಂ" ಎಂದು ವರ್ಣಿಸಲಾಗಿದೆ. ರಟ್ಟರ ವಂಶಕ್ಕೆ ತಿಳಕ ಪ್ರಾಯನಾದ ಕನ್ನಭೂಪನು ರತ್ನ ಚೂಡಾಮಣಿಯಂತೆ ಶೋಭಿಸುತ್ತಿದ್ದನು ಎನ್ನಲಾಗಿದೆ.

ಎರಡನೆಯ ಕನ್ನಕೈರನು ಯುದ್ಧ ಪ್ರವೀಣ, ವೀರ ಯೋಧನಾಗಿದ್ದಂತೆಯೆ ತನ್ನ ಅರಮನೆಯಲ್ಲಿ ನಡೆಯುವ ನೃತ್ಯ, ಗೀತೆ, ಸಾಹಿತ್ಯಗಳಿಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದನು. ಕ್ರಿ.ಶ. ೮೭೬ರ ಸವದತ್ತಿ ಶಾಸನ "ಕನ್ನಕೈರನೃಪಃ ಖ್ಯಾತೋನೃತ್ಯಗೀತಾ ದಿಕೋವಿದಃ" ಎಂದು ವರ್ಣಿಸಿದೆ. ಆಸ್ಥಾನದಲ್ಲಿ ಸಂಗೀತಗಾರರಿಗೆ, ನೃತ್ಯಗಾರ್ತಿಯರಿಗೆ, ಕವಿಗಳಿಗೆ ಪುರಸ್ಕಾರಗಳನ್ನು ನೀಡಿ, ಗೌರವಿಸಿದ ಕಾರಣ "ಖ್ಯಾತೋನೃತ್ಯಗೀತಾದಿ ಕೋವಿದಃ" ಎಂಬ ಬಿರುದು ಸಾರ್ಥಕವಾಗಿದೆ.

ಇಮ್ಮಡಿ ಕನ್ನಕೈರನು ಜೈನಧರ್ಮ ಮತ್ತು ಜೈನ ತತ್ವಶಾಸ್ತ್ರವನ್ನು ಕಲಿಯುವ ವಿದ್ಯಾರ್ಥಿಯಾಗಿದ್ದನು. ಇವನ ಗುರು ಕನಕಪ್ರಭಸಿದ್ಧಾಂತದೇವ. ಕ್ರಿ.ಶ. ೮೭೬ರ ಸವದತ್ತಿ ಶಾಸನ ಇವರನ್ನು "ತ್ರೈವಿದ್ಯೋಭೂಪಾ ಸರ್ವ್ವಶಾಸ್ತ್ರವಿಶಾರದಃ ಕನ್ನಕಪ್ರಭಸಿದ್ಧಾನ್ತದೇವೋ ಗಣಧರರೋತ್ತಮಃ" ಎಂದು ವರ್ಣಿಸಿದೆ.

ಇಮ್ಮಡಿ ಕನ್ನಕೈರನು ಬಸದಿಗಳನ್ನು ಕಟ್ಟಿಸಿದ ಉಲ್ಲೇಖಗಳಾವೂ ಉಪಲಬ್ಧವಾಗಿಲ್ಲ. ಆದರೆ ತನ್ನ ತಂದೆ ಒಂದನೆಯ ಕಾಳಸೇನನು ಸವದತ್ತಿಯಲ್ಲಿ ಕಟ್ಟಿಸಿದ ಬಸದಿಗೆ ಗುರುಗಳಾದ ಕನಕಪ್ರಭಸಿದ್ಧಾಂತರಿಗೆ ಭೂಮಿಯನ್ನು ದಾನ ಮಾಡಿದ್ದಾನೆ. ಕ್ರಿ.ಶ. ೧೦೮೭ರ ಕೊಣ್ಣೂರಿನ ಶಾಸನದಲ್ಲಿ 'ತಜ್ಜಿನಾಲಯವಂದನಾರ್ತ್ಥಂ ಶ್ರೀಮನ್ ಮಹಾಮಂಣ್ಡಳೇಶ್ವರಂ ಕನ್ನನೃಪಂ ದೇವರಂಗಭೋಗರಂಗಭೋಗಕ್ಕಾಂ ಖಂಡಸ್ಫುಟಿತ ಜೀರ್ಣ್ಣೋದ್ಧಾರಕ್ಕಂ" ಎಂದು ಹೇಳಿರುವುದರಿಂದ ಇಮ್ಮಡಿ ಕನ್ನಕೈರನು ಬಸದಿಗಳಿಗೆ ಭೂಮಿಯನ್ನು ದಾನವಾಗಿ ಬಿಟ್ಟಿರುವುದು ಸ್ಪಷ್ಟವಾಗುತ್ತದೆ.

ಇಮ್ಮಡಿ ಕನ್ನಕೈರನು ಸವದತ್ತಿ ರಟ್ಟರ ಸಾಮ್ರಾಜ್ಯ ಬೆಳೆಸುವಲ್ಲಿ, ಸಾಹಿತ್ಯ, ಕಲೆಗಳನ್ನು ಬೆಳೆಸಿ ಉಳಿಸುವಲ್ಲಿ, ಪ್ರದೇಶದ ಜನರು ಸುಖ ಶಾಂತಿಯಿಂದಿರಲು ಶ್ರಮವಹಿಸಿ ಅನೇಕ ಯುದ್ಧಗಳನ್ನು ಮಾಡಿ ಕ್ರಿ.ಶ. ೧೮೯೦ ರಲ್ಲಿ ಮರಣ ಹೊಂದಿದನು.

## ೧೬. ಎರಡನೆಯ ಕಾರ್ತವೀರ್ಯ (ಕ್ರಿ.ಶ. ೧೦೯೬)

ಇವನು ಸವದತ್ತಿ ರಟ್ಟರ ಒಂದನೆಯ ಕಾಳಸೇನನ ಕಿರಿಯ ಮಗ. ಕ್ರಿ.ಶ. ೧೦೮೭ರ ಸವದತ್ತಿ ಶಾಸನ "ಶ್ರೀಕನ್ನ ಭೂಪಾಳಕಂ। ತದನುಜಂ। ಕತ್ತನೃಪಾಳಂ" ಎಂದು ಉಲ್ಲೇಖಿಸಿರುವುದರಿಂದ ಎರಡನೆಯ ಕಾರ್ತವೀರ್ಯನೆಂದು ಸ್ಪಷ್ಟವಾಗುತ್ತದೆ. ಈ ಎರಡನೆಯ ಕಾರ್ತವೀರ್ಯನಿಗೆ ಅರಿಭೂಪಾಳನೆಂಬ ಮತ್ತೊಬ್ಬ ಅಣ್ಣನಿದ್ದುದು ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ. ೧೦೬೮ರ ಸವದತ್ತಿಯ ಶಾಸನ "ಆತನ ಕುಳಾಂಗನೆ ಶ್ರೀವನಿತೆತಾನೆ......... ನಹೀವನಿತೆಗೆ ತಿಳಕಮೆನಿಸಿ ಕತ್ತನವಕ್ಷ ಶ್ರೀವನಿತೆಗರ್ದ್ಧಭಾಗಲದೇವಿ ಜಗಜ್ಜನನಿ ಸಜ್ಜನಾಗ್ರಣಿಯಿನಿಕು" ಎಂದು ಉಲ್ಲೇಖಿಸಿರುವುದರಿಂದ ಎರಡನೆಯ ಕಾರ್ತವೀರ್ಯನ ಪತ್ನಿ ಭಾಗಲದೇವಿ ಎಂದು ಸ್ಪಷ್ಟವಾಗುತ್ತದೆ. ಡಾ॥ ರಾಜಶೇಖರ ಇಚ್ಚಂಗಿ ಮತ್ತು ಡಾ.ಎಸ್.ಬಿ. ಪಾಟೀಲರು, ಡಾ.ಬಿ.ಆರ್. ಹುಂದೂರು [೨೯] ಎರಡನೆಯ ಕಾರ್ತವೀರ್ಯನಿಗೆ ಮೈಳಲದೇವಿ ಎಂಬ ಇನ್ನೊಬ್ಬ ಹೆಂಡತಿ ಇದ್ದಳೆಂಬ ಅಭಿಪ್ರಾಯಪಟ್ಟಿದ್ದಾರೆ. ಆದರೆ ಎರಡನೆಯ ಕಾರ್ತವೀರ್ಯನ ತಾಯಿ ಮೈಳಲದೇವಿಯೆಂದು ಶಾಸನಗಳಲ್ಲಿ ಸ್ಪಷ್ಟವಾಗಿರುವದರಿಂದ ಭಾಗಲದೇವಿಯೇ ಎರಡನೆಯ ಕಾರ್ತವೀರ್ಯನ ಹೆಂಡತಿಯೆಂದು ಸ್ಪಷ್ಟವಾಗುತ್ತದೆ.

ಅಣ್ಣ ಎರಡನೆಯ ಕನ್ನಕೈರನ ನಂತರ ಎರಡನೆಯ ಕಾರ್ತವೀರ್ಯನು ಸವದತ್ತಿ ರಟ್ಟರ ರಾಜ್ಯ ಸೂತ್ರಗಳನ್ನು ವಹಿಸಿಕೊಂಡನು. ಎರಡನೆಯ ಕಾರ್ತವೀರ್ಯನು ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನೆಂದು ಕ್ರಿ.ಶ. ೧೧೦೮ರ ಮುಧೋಳ ತಾಲೂಕಿನ ರೂಗಿ ಶಾಸನ, ಕ್ರಿ.ಶ. ೧೧೨೫ರ ತೇರದಾಳ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಈ ಅಭಿಪ್ರಾಯವನ್ನು ಶ್ರೀ ದಿನಕರ ದೇಸಾಯಿ, ಡಾ॥ ನಾಗಯ್ಯ ಜೆ.ಎಮ್., ಡಾ॥ ಪಾಟೀಲ ಎಸ್.ಬಿ. ಇವರುಗಳು ಒಪ್ಪಿಕೊಂಡಿದ್ದಾರೆ. ಆದರೆ, ಚಾಳುಕ್ಯ ಎರಡನೆಯ ಸೋಮೇಶ್ವರನ ಆಳ್ವಿಕೆಯ ಕಾಲದ ಹಿರೇಕೆರೂರು ತಾಲೂಕಿನ ಕಡೂರು ಶಾಸನ ಮತ್ತು ಕ್ರಿ.ಶ. ೧೦೬೮ರ ಸವದತ್ತಿಯ ಶಾಸನಗಳಲ್ಲಿ ಎರಡನೆಯ ಕಾರ್ತವೀರ್ಯನು ಎರಡನೆಯ ಸೋಮೇಶ್ವರನ ಸಾಮಂತನಾಗಿದ್ದನೆಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಈ ಮೇಲಿನ ಆಧಾರಗಳಿಂದ ಎರಡನೆಯ ಕಾರ್ತವೀರ್ಯನೆಂದು ಚಾಳುಕ್ಯರ ಎರಡನೆಯ ಸೋಮೇಶ್ವರನ ಮತ್ತು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನೆಂದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೦೬೮ರ ಸವದತ್ತಿ ಶಾಸನದಲ್ಲಿ ಇವನನ್ನು – 'ಶ್ರೀಮದ್ಭುವನೈಕಮಲ್ಲದೇವರ-ತತ್ಪಾದಪದ್ಮೋಪಜೀವಿ', ಪಂಚಮಹಾಶಬ್ದ ಮಹಾಮಂಡಳೇಶ್ವರ, ಲತ್ತಲೂರ್ಪುರವರೇಶ್ವರ, ತ್ರಿವಳಿತೂರ್ಯ್ಯ, ವೈರಿಕುಳ ವಿಳಯಾಂತಕವಿಭೀಷಣ, ಸಿಂಧೂರಲಾಂಛನ, ಸುವರ್ಣಗರುಡಧ್ವಜ, ಮಕರಧ್ವಜ, ರಟ್ಟಕುಳ ವನಜಮಾರ್ತ್ತಣ್ಡಂ, ಕದನಪ್ರಚಂಡ, ಸಮರವೀರ ವೃಕೋದರ ಮುಂತಾದ ಪ್ರಶಸ್ತಿಗಳಿಂದ ಸ್ತುತಿಸಲಾಗಿದೆ.

ಡಾ॥ ನಾಗಯ್ಯ ಜೆ. ಎಮ್. ಮತ್ತು ಡಾ॥ ಪಾಟೀಲ ಎಸ್.ಬಿ. ಅವರು 'ಸಾಹಸೋತ್ತುಂಗ, ಸೇನನಸಿಂಹ' ಎಂಬ ಪ್ರಶಸ್ತಿಗಳು ಮೂರನೆಯ ಕಾರ್ತವೀರ್ಯ್ಯನಿಗೆ ಇದ್ದುವೆಂದೂ, ಇವನ ಆಜ್ಞೆಯ ಮೇರೆ ಜೀಮೂತ ವಾಹನನಾದ ಮಂಡಳಿಕ ಗೊಂಕಿದೇವ ತೇರದಾಳದಲ್ಲಿ ಗೊಂಕಜಿನಾಲಯವನ್ನು ನಿರ್ಮಿಸಿದನೆಂದು ಅಭಿಪ್ರಾಯಿಸಿದ್ದಾರೆ. ಈ ಎರಡನೆಯ ಕಾರ್ತವೀರ್ಯ್ಯನಿಗೆ ಸಾಹಸೋತ್ತುಂಬ, ಸೇನಸಿಂಗ ಎಂಬ ಬಿರುದುಗಳಿದ್ದುದನ್ನು ಚಾಳುಕ್ಯರ ಆರನೆಯ ವಿಕ್ರಮಾದಿತ್ಯನ ಕ್ರಿ.ಶ. ೧೧೨೩ರ ತೇರದಾಳ ಶಾಸನ, ಎರಡನೆಯ ಕಾರ್ತವೀರ್ಯ್ಯನ ಕ್ರಿ.ಶ. ೧೦೮೭ರ ಸವದತ್ತಿ ಶಾಸನ, ಚಾಳುಕ್ಯ ಎರಡನೆಯ ಸೋಮೇಶ್ವರನ ಶಾಸನಗಳು ಸ್ಪಷ್ಟಪಡಿಸುತ್ತಿವೆ. ಈ ಅಭಿಪ್ರಾಯವನ್ನು ಶ್ರೀ ದಿನಕರ ದೇಸಾಯಿಯವರು ಒಪ್ಪಿಕೊಂಡಿದ್ದಾರೆ. ಎರಡನೆಯ ಕಾರ್ತವೀರ್ಯ್ಯನ ಆಳ್ವಿಕೆ ಕಾಲದ ಸವದತ್ತಿ ಶಾಸನದಲ್ಲಿ "ಸಾಹಸೋತ್ತುಂಗಂ ಸೇನನಸಿಂಗಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್‌ಮಹಾಮಂಡಳೇಶ್ವರಂ ಕಾರ್ತ್ತವೀರ್ಯ್ಯರಸರ್। ಆ ಮಹಾನುಭಾವನ ಮನೋನಯನವಲ್ಲಭೆ----- ಭಾಗಲದೇವಿಗೋಪ್ಪುಗುಂ" ಎಂದಿರುವುದರಿಂದ ಎರಡನೆಯ ಕಾರ್ತವೀರ್ಯ್ಯನ ಪತ್ನಿ ಭಾಗಲದೇವಿಯೆಂದೂ, ಈ ಎರಡನೆಯ ಕಾರ್ತವೀರ್ಯ್ಯನಿಗೆ ಸಾಹಸೋತ್ತುಂಬ, ಸೇನಸಿಂಗ, ಎಂಬ ಬಿರುದುಗಳಿದ್ದುವೆಂದೂ ಸ್ಪಷ್ಟವಾಗುತ್ತದೆ.

ಎರಡನೆಯ ಕಾರ್ತವೀರ್ಯ್ಯನಿಗೆ ಸೇನಸಿಂಹ ಎಂಬ ಬಿರುದು ಹಾಗೂ ಎರಡನೆಯ ಲಕ್ಷ್ಮೀದೇವನಿಗೆ ಬೊಪ್ಪಣಸಿಂಗ ಎಂಬ ಬಿರುದುಗಳಿದ್ದುದು ಸ್ಪಷ್ಟವಾಗುತ್ತದೆ. ಆರನೆಯ ವಿಕ್ರಮಾದಿತ್ಯನ ಆಳ್ವಿಕೆ ಕಾಲದ (ಕ್ರಿ.ಶ. ೧೧೨೩) ತೇರದಾಳದ ಶಾಸನದಲ್ಲಿ ಸಾಹಸೋತ್ತುಂಗ, ಸೇನನಸಿಂಹ ಎಂಬ ಬಿರುದಾಂಕಿತವಾದ ಕಾರ್ತವೀರ್ಯನ ಆಜ್ಞೆಯ ಮೇರೆಗೆ ಮಂಡಳಿಕನಾದ ಗೊಂಕದೇವರಸನು ತೇರದಾಳದಲ್ಲಿ ಗೊಂಕ ಜಿನಾಲಯವನ್ನು ಕಟ್ಟಿಸಿ, ನೇಮಿನಾಥನ ಮೂರ್ತಿಯನ್ನು ಕಾರ್ತವೀರ್ಯನ ಸಮ್ಮುಖದಲ್ಲಿ ಪ್ರತಿಷ್ಠಾಪಿಸಿದ್ದಾನೆ. ಮುಂದೆ ಈ ಜಿನಾಲಯದ

ಮುನಿಪ್ರಧಾನರು ಕೊಲ್ಲಾಪೂರದ ರೂಪನಾರಾಯಣ ಬಸದಿಯ ಮಂಡಲಾಚಾರ್ಯ್ಯರಾದ ಶ್ರೀ ಮಾಘಣಂದಿಗಳನ್ನು ಕರೆಸಿದ ಸಂದರ್ಭದಲ್ಲಿ (ಕ್ರಿ.ಶ. ೧೧೨೩) ರಲ್ಲಿ ಈ ಗೊಂಕಜಿನಾಲಯಕ್ಕೆ ಪನ್ನಿರ್ವ್ವಗ್ಗಾವುಂಡರುಗಳು ಭೂಮಿಯನ್ನು ದಾನ ಮಾಡಿದ ಉಲ್ಲೇಖವಿದೆ.

ಸಾಹಸೋತ್ತುಂಗ, ಸೇನನಸಿಂಹ ಎಂಬ ಬಿರುದುಗಳು ಎರಡನೆಯ ಕಾರ್ತವೀರ್ಯನಿಗೆ ಇದ್ದವೆಂದೂ, ಇವನೇ ಗೊಂಕಿದೇವರಸನಿಗೆ ತೇರದಾಳದಲ್ಲಿ ಬಸದಿಯನ್ನು ಕಟ್ಟಲು ಆಜ್ಞೆ ಮಾಡಿದ್ದಾನೆಂಬ ಅಭಿಪ್ರಾಯವನ್ನು ಡಾ॥ ನಾಗಯ್ಯ ಜೆ.ಎಮ್., ಡಾ. ಎಸ್.ಬಿ. ಪಾಟೀಲರು ಹಾಗೂ ಡಾ.ಬಿ.ಆರ್. ಹಂದೂರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಸಾಹಸೋತ್ತುಂಗ, ಸೇನನಸಿಂಗ ಎಂಬ ಬಿರುದಾಂಕಿತವಾದ ಎರಡನೆಯ ಕಾರ್ತವೀರ್ಯನ ಹೆಂಡತಿ ಭಾಗಲದೇವಿಯೆಂದೂ, ಇವನೇ ಗೊಂಕಿದೇವರಸನಿಗೆ ತೇರದಾಳದಲ್ಲಿ ಬಸದಿಯನ್ನು ಕಟ್ಟಲು ಆಜ್ಞೆ ಮಾಡಿದ್ದಾನೆಂದೂ ಶಾಸನಾಧಾರಗಳಿಂದ ಸ್ಪಷ್ಟವಾಗುವುದರಿಂದ ಸಾಹಸೋತ್ತುಂಬ, ಸೇನನಸಿಂಗ ಎಂಬ ಬಿರುದಾಂಕಿತ, ಭಾಗಲದೇವಿಯ ಪತಿ, ತೇರದಾಳದಲ್ಲಿ ಗೊಂಕನಿಜಾಲಯ ನಿರ್ಮಾಣದ ಆಜ್ಞಾಧಾರಕ ಮೂರನೆಯ ಕಾರ್ತವೀರ್ಯನು ಆಡಳಿತದಲ್ಲಿ ಸಲಹೆಗಳನ್ನು ನೀಡುತ್ತಿದ್ದನು. ಆದ್ದರಿಂದ ಸೇನನಸಿಂಹೆಂಬ ಬಿರುದನ್ನು ನೀಡಿ ಗೌರವಿಸಿದಂತೆ ತೋರುತ್ತದೆ.

ಇವನ ಪರಾಕ್ರಮವನ್ನು ಕುರಿತು ಸವದತ್ತಿ ಶಾಸನದಲ್ಲಿ –

"ಸಿಡಿಲಂತಿರ್ಪ್ಪೊಯ್ಯಲುಂನಾಕರಿಯ
ಸೆಡಱಿಸಲ್ಮೇಱುವಂನೂಂಕಲುರ್ಕ್ಕುಂ
ತುಡುಕಲ್ ಸಂಸಾರಿಯುಂತಿಕ್ಕಿಸಲಿನಶಶಿಯಂಮೀಟಲುಂ
ಬೆಟ್ಟ ಕಡಲುಂಲ------ ಮೋಗ್ಗ್ರಣಲಣ್ಮಂನುಡಿಯಲು
ಮಾರ್ಕ್ಕೊಣ್ಣು ಕಾದಲ್ ಸುಭಟರೊ------ ಕತ್ತಿಗಂ------"

ಎಂದು ವರ್ಣಿಸಲಾಗಿದೆ. ರಣರಂಗದಲ್ಲಿ ಭಯಂಕರನೂ, ಸಿಡಿಲಿಗೆ ಸಮಾನನೂ ಆದ ಎರಡನೆಯ ಕಾರ್ತವೀರ್ಯನು ಮಹಾ ಉಗ್ರನಾಗಿದ್ದನು. ಮದಗಿಸೆದ ಆನೆಯು ಅಚಲವಾದ ಮೇರು ಪರ್ವತವನ್ನೇ ನೂಕಿ ಕೆಡುವುವಂತೆ ಪರಾಕ್ರಮಿಯಾದ ಎರಡನೆಯ ಕಾರ್ತವೀರ್ಯನು ವೈರಿ ಸೈನ್ಯವನ್ನು ಹೊಡೆದು ಹಿಮ್ಮೆಟ್ಟಿಸುತ್ತಿದ್ದನು. ಇವನು ಕಂಸನಂತೆ ಭಯಂಕರನೂ, ಸೂರ್ಯನಂತೆ ತೇಜಸ್ವಿಯೂ ಆಗಿದ್ದನು. ಇವನು ಅಣ್ಣ ಎರಡನೆಯ ಕನ್ನಕೈರನಿಗಿಂತಲೂ

ಭಯಂಕರನಾಗಿದ್ದನು. ಸಮುದ್ರದಂತೆ ಗಂಭೀರನೂ ಮಂದಾರ ಪರ್ವತದಂತೆ ಅಚಲನೂ ಆಗಿದ್ದನು.

ಎರಡನೆಯ ಕಾರ್ತವೀರ್ಯನು ಸಾಮ್ರಾಜ್ಯವನ್ನು ಬೆಳೆಸಿ ಉಳಿಸಿದಂತೆಯೆ, ಜೈನಧರ್ಮವನ್ನುಳಿಸಿ ಬೆಳೆಸಿದ್ದಾನೆ. ತೇರದಾಳದಲ್ಲಿ ಜಿನಾಲಯ ಕಟ್ಟಲು ಕಾರಣೀಭೂತನಾಗಿ ತನ್ನ ಜೀವನವನ್ನು ಜೈನಧರ್ಮದೇಳ್ಗೆಗೆ ಮುಡಿಪಾಗಿಟ್ಟಿದ್ದಾನೆ. ಹೀಗೆ ಇವನು ತನ್ನ ಹೆಸರನ್ನು ಅಜರಾಮರಗೊಳಿಸಿ ಕ್ರಿ.ಶ. ೧೧೯೫ ರಲ್ಲಿ ಮರಣ ಹೊಂದಿದನು.

**೧೭. ಇಮ್ಮಡಿ ಸೇನ (ಕಾಲ ಸು. ೧೧೯೬)**

ಇಮ್ಮಡಿ ಕಾರ್ತವೀರ್ಯನ ಮಗನಾದ ಇಮ್ಮಡಿ ಸೇನನು ಸೌಂದತ್ತಿಯ ರಟ್ಟರಲ್ಲಿ ಬಹುಮುಖ್ಯವಾದ ದೊರೆ. ಈತನು ಆರನೇ ವಿಕ್ರಮಾದಿತ್ಯನ ದ್ವಿತೀಯ ಪುತ್ರನಾದ ಜಯಕರ್ಣನ ಸೇನಾಪತಿ ಚಾವುಂಡನನಿಗೆ ಅಧೀನನಾಗಿ ಕುಹುಂಡಿ ಮೂರು ಸಾಸಿರ ಆಳಿಕೊಂಡಿದ್ದನೆಂದು ತಿಳಿದುಬರುತ್ತದೆ. "ಸ್ವಸ್ತಿಸಮದಿಗತ ಪಂಚಮಹಾಸ್ತುತ್ಯ ವಿರಾಜಮಾನ ಶಬ್ದಮಹಾಶ್ರೀ ವಿಸ್ತರಂ ಪೃಥುವಿ ಮಳಗುಣಸ್ತೋಮಂ ಮಂಡಳೇಶ್ವರಂ ಸೇನ ನೃಪಂ" ಎಂದು ಕೊಣ್ಣೂರು (ಗೋಕಾಕ ತಾಲೂಕ) ಶಾಸನದಲ್ಲಿ ಹೇಳಲಾಗಿದೆ.

ಇವನ ಮೂವತ್ತೈದು ವರ್ಷಗಳ ಆಳ್ವಿಕೆಯು ರಟ್ಟರ ಇತಿಹಾಸದಲ್ಲಿ ಒಂದು ಸುವರ್ಣ ಅಧ್ಯಾಯ, ಈತನು ರಟ್ಟರ ಮೊದಲನೇ ದೊರೆಯೆಂದು ಹೊಗಳಿಸಿ ಕೊಳ್ಳುವಷ್ಟು ಪ್ರಖ್ಯಾತನಾಗಿದ್ದನು. "...ರಟ್ಟ ವಂಶಾಂಬುದು ಹಾರ್ಕ್ಕಂ ತಾನೆನಿಪುನ್ನಶಿ" ಎಂದು ನೇಸರಗಿ ಶಾಸನದಲ್ಲಿ ಹೇಳಲಾಗಿದೆ. "...ಶ್ರೀನುತ ರಟ್ಟವಂಶವರ ವಾರ್ಧ್ಧಿಬ ವರ್ಷ ಲರುಂ"[೩೦] ಎಂದು ಗೊತ್ತಾಗುತ್ತದೆ.

ಇಮ್ಮಡಿ ಸೇನನು ಬಹುಶೂರನೂ, ಸಾಹಸಿಯೂ ಆಗಿದ್ದನು. ಪ್ರಜೆಗಳು ಬಹು ಹೆಮ್ಮೆಯಿಂದ "ಪೃಥ್ವಿ ವಲ್ಲಭ"ನೆಂದು ಕೊಂಡಾಡಿದ್ದಾರೆ. ಮತ್ತು ಇವನು ಕೀರ್ತಿಕನ್ಯೆಯ ವರನೂ, ಯುದ್ಧದಲ್ಲಿ ಭಯಂಕರನೂ, ವಿಜಯ ಲಕ್ಷ್ಮಿಯ ಮಿತ್ರನೂ ಆಗಿದ್ದು ಶತ್ರುಗಳ ಶಿರಗಳನ್ನು ಚೆಂಡಾಡುವದರಲ್ಲಿ ನಿಪುಣನಾಗಿದ್ದು ದುಷ್ಟ ಶಿಕ್ಷಕನೂ ಶಿಷ್ಟ ರಕ್ಷಕನೂ ಆಗಿದ್ದು ಇವನು ದಕ್ಷತೆಯಿಂದ ರಾಜ್ಯಭಾರ ಮಾಡಿದನು. ರಾಜ್ಯದ ಸಂಪತ್ತಿನ ಒಂದು ಭಾಗವನ್ನು ಈ ದೊರೆಯು ಕಲಾಭಿವೃದ್ಧಿಗಾಗಿ ವಿನಿಯೋಗಿಸುತ್ತಿದ್ದನು. ವಿದ್ವಾಂಸರಿಗೆ ಉದಾರ ಪ್ರೋತ್ಸಾಹವನ್ನು ನೀಡುವ ಈ

ಅರಸನು ವಿದ್ಯಾಭಿಮಾನಿಯಾಗಿದ್ದಲ್ಲದೆ ತಾನೇ ಸ್ವತಃ ವಿದ್ವಾಂಸನಾಗಿ ವಿದ್ವಾಂಸರ ಮಧ್ಯ ಸೂರ್ಯನಂತೆ ಶೋಭಿಸುತ್ತಿದ್ದನು.[೩೧]

ಲಖುವಾದೇವಿ (ಲಕ್ಷ್ಮೀದೇವಿ) ಎಂಬ ಪಟ್ಟ ಮಹಿಷಿ ಇದ್ದಳು. ಅವಳೂ ಕೊಡುಗೈ ದಾನಿಯಾಗಿದ್ದಳು. ಇವನ ಕಾಲದಲ್ಲಿ ಗುಡಿಗಳನ್ನು ಬಸದಿಗಳನ್ನು ಕಟ್ಟಿಸಿದುದು ಮತ್ತು ಅವುಗಳ ಜೀರ್ಣೋದ್ಧಾರ ಮಾಡಿಸಿದುದು ಹೊಸೂರ (ತಾ. ಸೌಂದತ್ತಿ) ಶಾಸನದಿಂದ ತಿಳಿದುಬರುತ್ತದೆ. ಈ ಶಾಸನ ಕವಿ ಲಕ್ಷ್ಮಣನೆನ್ನುವವನು ಪ್ರೌಢ ಕವಿಗಳ ಪಂಕ್ತಿಗೆ ಸೇರಿದವನಿದ್ದು ಅವನು ಒಳ್ಳೊಳ್ಳೆ ಕೃತಿಗಳನ್ನು ರಚಿಸಿರಬಹುದು. (ಆದರೆ ಅವನ ಕೃತಿಗಳು ಸಿಕ್ಕಿಲ್ಲ. ಒಂದು ವೇಳೆ ಅವನ ಕೃತಿಗಳು ಲಭಿಸಿದರೆ ಲಕ್ಷ್ಮಣ ಕವಿಯೊಂದಿಗೆ ಇಮ್ಮಡಿಸೇನನ ಬಗೆಗೆ ಇನ್ನೂ ಹೆಚ್ಚಿನ ವಿಷಯಗಳು ಬೆಳಕಿಗೆ ಬರುವ ಸಾಧ್ಯತೆಯಿದೆ.)



### ೧೮. ಮುಮ್ಮಡಿ ಕಾರ್ತವೀರ್ಯ

ಕ್ರಿ.ಶ. ಸು. ೧೦೩೦ ರಿಂದ ೧೧೫೩ರ ವರೆಗೆ ಎಂದು ಎಂ.ವ್ಹಿ. ಶ್ರೀನಿವಾಸರು ಹೇಳುತ್ತಾರೆ. ೧೧೪೩ ರಿಂದ ೧೧೯೫ ಎಂದು ಎಂ.ವ್ಹಿ. ಕೃಷ್ಣರು ಹೇಳುತ್ತಾರೆ. ೧೧೭೦ರ ಕೊಣ್ಣೂರ ತಟಾಕೇಶ್ವರ ಶಾಸನದಿಂದ ಮೂರನೆಯ ಕಾರ್ತವೀರ್ಯನು ಬಿಜ್ಜಳನ ಮಗ ಸೋಯಿದೇವನ ಸಾಮಂತನಾಗಿ ಕುಹುಂಡಿ ಮೂರು ಸಾಸಿರ ನಾಡನ್ನು ಆಳುತ್ತಿದ್ದಂತೆ ಹೇಳುತ್ತಾರೆ. ಈ ವಿವಿಧ ಹೇಳಿಕೆಗಳು ಅಷ್ಟೊಂದು ಹೆಚ್ಚು ಕಡಿಮೆಯಾಗದೇ ಸ್ವಲ್ಪ ಹತ್ತಿರವಿರುತ್ತದೆ.

ಇಮ್ಮಡಿ ಸೇನನ ಮಗ ಮುಮ್ಮಡಿ ಕಾರ್ತವೀರ್ಯನು ೧೧೩೦ ರಲ್ಲಿ ಗದ್ದುಗೆಯನ್ನೇರಿ ೨೩ ವರ್ಷಗಳ ಕಾಲ ಆಳಿದನು. ಇವನ ಆಳ್ವಿಕೆಯಲ್ಲಿ ಸೌಂದತ್ತಿ ರಟ್ಟರ ಕೀರ್ತಿ ಉತ್ತುಂಗ ಶಿಖರವನ್ನೇರಿತು. ಈ ಅರಸನಿಗೆ ತಾನು ಸಂಪೂರ್ಣ ಸ್ವತಂತ್ರನಾಗಬೇಕೆಂಬ ಆಸೆಯಾಗಿ ನೇಸರಿಗೆಯಲ್ಲೊಂದು ರಾಜಧಾನಿಯನ್ನು ಸ್ಥಾಪಿಸಿದನು. ಇದೂವರೆಗೆ ಮಾಂಡಲೀಕರಾಗಿ ಆಳಿತ್ತಿದ್ದಂತಹ ರಟ್ಟರು ಸ್ವತಂತ್ರರಾಗಲು ಪ್ರಾರಂಭಿಸಿದರು. ಹಣ್ಣಿಕೇರಿಯ ಶಾಸನ ಕಾಲ ಸು.೧೧೮೪-೮೫ರ ಪ್ರಕಾರ ಹೊಯ್ಸಳ ಹಾಗೂ ಯಾದವರ ಕಲಹದ ಕಾಲದಲ್ಲಿ ರಟ್ಟರು ಸ್ವತಂತ್ರರಾಗಿ ಸೌಂದತ್ತಿಯಿಂದ ಬೆಳಗಾವಿಗೆ ಸ್ಥಳಾಂತರಿಸಿದರೆಂದು ಹೇಳಲಾಗುತ್ತಿದೆ. ಇದು ನಾಲ್ಮಡಿ ಸೋಮೇಶ್ವರನ ಕಾಲದ ಶಾಸನ. (ಇವನ ಕಾಲ ಸು. ೧೧೮೧ ರಿಂದ ೮೯)

ರಟ್ಟರ ಕುಹುಂಡಿ ನಾಡಿನ ನಿಸರ್ಗ ಸೌಂದರ್ಯ "ಬೆಳಸೆಂದುಂ ಕುಂದ ವಿಪುಲ ಫಲ ಜಯಂ ಕ್ಷೇಮ ಧಾನ್ಯಂ" ಎಂದು ನೇಸರಿಗೆಯ ಶಾಸನದಲ್ಲಿ ಹೇಳಲಾಗಿದೆ. ಹಣ್ಣಿಕೇರಿ ಹಾಗೂ

ತೇರದಾಳ ಶಾಸನಗಳು ಕುಹುಂಡಿ ನಾಡಿನ ವಿಸ್ತಾರವನ್ನು ಹೇಳುತ್ತದೆ. ಪಶ್ಚಿಮಕ್ಕೆ ಕೊಲ್ಹಾಪೂರ ಶಿಲಾಹಾರರು, ಉತ್ತರಕ್ಕೆ ಮಂಗಳವೇಡೆಯ ಕಳಚೂರರು ದಕ್ಷಿಣಕ್ಕೆ ಗೋವೆಯ ಕದಂಬರು ಇಂದಿನ ಬೆಳಗಾವಿ ಜಿಲ್ಲೆಯ ಪೂರ್ವಗಡಿಯೇ ಅಂದೂ ಪೂರ್ವ ಸೀಮೆಯಾಗಿತ್ತು ಎಂದು ಮೇರೆಗಳನ್ನು ಹೇಳಲಾಗಿದೆ.

ಮುಮ್ಮಡಿ ಕಾರ್ತವೀರ್ಯನು ಸರ್ವಧರ್ಮಕ್ಕೆ ಪ್ರೋತ್ಸಾಹ ನೀಡಿದ್ದನು. ತನ್ನ ಕುಹುಂಡಿ ಮಂಡಲದಲ್ಲಿ ಬುದ್ಧ, ಮರ್ಧವ, ಅರ್ಕ, ಶಂಕರ, ಜಿನ "ಭೂಮಿಸುತ ಚತುಸ್ಸಮಯವ ನಾವಗ ಮೆಸೆವಾರು ದರ್ಶನಂಗಳುಮಂ" ದೇವಾಲಯಗಳು ಅಪಾರವಾಗಿದ್ದುದನ್ನು ಶಾಸನೊಂದು ಹೇಳುತ್ತದೆ. ಇದರಿಂದ ಮುಮ್ಮಡಿ ಕಾರ್ತವೀರ್ಯನ ಔದಾರ್ಯವು ಗೊತ್ತಾಗುತ್ತದೆ.

ಮುಂದೆ ಆಳಿದ ಈ ಸಂತತಿಯ ಅರಸರೆಲ್ಲಾ ಇವನನ್ನು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತಿದ್ದರು. ಈ ಅರಸನ ಆಜ್ಞೆಯ ಮೇರೆಗೆ ಮಂಡಳಿಕ ಗೊಂಕರಸನು ತೇರದಾಳದಲ್ಲಿ ಜಿನಾಲಯ ಕಟ್ಟಿಸಿ ಅದಕ್ಕೆ ಗೊಂಕ ಜಿನಾಲಯವೆಂದು ಹೆಸರಿಟ್ಟು ಅಲ್ಲಿಗೆ ಕೊಲ್ಲಾಪುರದ ಮಘನಂದಿ ಸೈದಾಂತಿಕರನ್ನು ಕರೆಯಿಸಿ ಶ್ರೀ ನೇಮಿನಾಥನನನ್ನು ಪ್ರತಿಷ್ಠೆ ಮಾಡಿಸಿದನು. ಸು. ೧೧೨೩ ರಲ್ಲಿ ಚಾಲುಕ್ಯ ೬ನೇ ವಿಕ್ರಮಾದಿತ್ಯನ ಮಾಂಡಲಿಕನಾದ ಗೊಂಕರಸನು ತೇರದಾಳ ಕಂಪಣವನ್ನು ತೇರದಾಳ ರಾಜಧಾನಿಯಿಂದ ಆಳುತ್ತಿದ್ದನೆಂದು ಅದೇ ಶಾಸನದಿಂದ ಗೊತ್ತಾಗುತ್ತದೆ.

ಮುಮ್ಮಡಿ ಕಾರ್ತವೀರ್ಯನ ಶೌರ್ಯ, ಸಾಹಸ, ಪರಾಕ್ರಮಗಳು ಮನೆ ಮಾತಾಗಿದ್ದವು. ಅವನ ಪತ್ನಿ ಪದ್ಮಲಾದೇವಿಯು ರೂಪವತಿಯೂ, ಕಲಾಕುಶಲಳೂ ಆಗಿದ್ದಳು. ಅಸಾಧಾರಣ ಪ್ರತಿಭಾನ್ವಿತಳಾಗಿದ್ದು ಈಕೆಯು ತನ್ನ ಬಾಳಿನಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಮತೋಲನವನ್ನು ಸ್ಥಾಪಿಸಿಕೊಂಡು ಆದರ್ಶ ಜೀವನವನ್ನು ನಡೆಸಿದಳು. ಈ ಸಾಧ್ವಿಯು ಜೈನ ಧರ್ಮಕ್ಕೆ ವಿಶೇಷ ಪ್ರೋತ್ಸಾಹ ನೀಡಿದಳು. ಜೈನರು ಈಕೆಯನ್ನು ಎರಡನೇ ಪದ್ಮಾವತಿಯೆಂದು ಹೊಗಳಿ ಕೊಂಡಾಡಿದರು.

ರಾಯಬಾಗದ ಒಂದು ಶಾಸನವನ್ನು ಬರೆಯಿಸಲು ಕಾರಣನಾದವನು ಮುಮ್ಮಡಿ ಕಾರ್ತವೀರ್ಯನಿಂದ ಕೃಪಾಪೋಷಿತನಾದ ಹಂಮ್ಮುರಾಜನೆನ್ನುವನು. ಅವನು ಹೀಗೆ ಶಾಸನ ಬರೆಸುತ್ತಾನೆ. ತನ್ನ ವಂಶಜರು ರಟ್ಟರಸರ ಪದ್ಮೋಪಜೀವಿಯಾದ ಬಾಚರಸನೆಂಬುವವನಿದ್ದನು. ಅವನ ಧರ್ಮಪತ್ನಿ ಪರಸವ್ವೆ. ಈ ದಂಪತಿಗಳಿಗೆ ನಾಲ್ಕು ಜನ ಮಕ್ಕಳು. ೧) ಹಂಮ್ಮಣಯ್ಯ

೨) ಬೆಡ್ಡಣಯ್ಯಾ ೩) ಶ್ರೀಕಾಳಿಮಯ್ಯ ೪) ಚಾಮುಂಡರಾಯ. ಹಂಮ್ಮಣಯ್ಯ ಅತೀವೀರ ಮತ್ತು ಸಾಹಸಿ, ಬೆಟ್ಟಣಯ್ಯಾ ಜನರನ್ನು ರಂಜಿಸುವ ವಿದ್ವಾನ್, ವಿದೂಷಕ, ಶ್ರೀಕಾಳಿಮಯ್ಯನು ರಾಜ್ಯಸಭಾಸದರಿಂದ ಸ್ತುತಿಸಲ್ಪಟ್ಟ ಸಾಹಿತಿ ಹಾಗೂ ವಾಗ್ಮಿ. ಚಾವುಂಡರಾಯನು ಪರಿಣಿತನಾದ ಮಂತ್ರಿಯು ಈ ಪ್ರಕಾರವಾಗಿ ಈ ನಾಲ್ವರು ರಟ್ಟರ ರಾಜ್ಯಕ್ಕೆ ಶೋಭೆ ತಂದವರಾಗಿದ್ದರೆಂದು ಹೇಳಲಾಗಿದೆ.

ಇಂಥ ವೈಭವ ಹಾಗೂ ದಕ್ಷ ಮತ್ತು ಪ್ರಜಾನುರಾಗಿಗಳಾದ ರಾಜ ರಾಣಿಯರಾದ ಮುಮ್ಮಡಿ ಕಾರ್ತವೀರ್ಯ ಹಾಗೂ ಪದ್ಮಲಾದೇವಿಯರ ಉದರದಿಂದ ಲಕ್ಷ್ಮೀದೇವನು ಹುಟ್ಟಿದನು. ಮುಂದೆ ಅವನೇ ಪಟ್ಟಕ್ಕೆ ಬಂದನು.

## ೧೯ ಲಕ್ಷ್ಮೀದೇವ (ಕಾಲ ಸು. ೧೧೭೦ ರಿಂದ ೧೧೯೦)

ಮುಮ್ಮಡಿ ಕಾರ್ತವೀರ್ಯನ ನಂತರ ಲಕ್ಷ್ಮೀದೇವನೆಂಬ ಸಮರ್ಥನಾದ ಅರಸನು ರಾಜ ಭಾರ ಮಾಡಿದನು. ಇವನ ಕಾಲದಲ್ಲಿಯೇ ವೇಣುಗ್ರಾಮವು (ಈಗಿನ ಬೆಳಗಾವಿ) ರಟ್ಟರ ರಾಜಧಾನಿಯಾಯ್ತು. "೧ನೇ ಲಕ್ಷ್ಮೀದೇವನು ಗೋವೆಯ ಕದಂಬರಿಂದ ವೇಣುಗ್ರಾಮವನ್ನು ಗೆದ್ದು ರಾಜಧಾನಿಯನ್ನಾಗಿ ಮಾಡಿಕೊಂಡನೆಂದು ಹೇಳುತ್ತಾರೆ. ತನ್ನ ರಾಜ್ಯವನ್ನು ಬಲಪಡಿಸುವ ಉದ್ದೇಶದಿಂದ ಲಕ್ಷ್ಮೀದೇವನು ವೇಣುಗ್ರಾಮವನ್ನು ತನ್ನ ವಶಕ್ಕೆ ತಕ್ಕೊಂಡು ಅದನ್ನು ಹೊಸ ರಾಜಧಾನಿಯನ್ನಾಗಿ ಮಾಡಿದನು. ಈ ದೊರೆಯು ಶಕ್ತಿಶಾಲಿಯೂ, ಸ್ಫುರದ್ರೂಪಿಯೂ ಆಗಿದ್ದನು. ಪ್ರಜೆಗಳು ಇವನನ್ನು ಮನ್ಮಥ, ವಸಂತ, ಚಂದ್ರ, "ಜನನಯನಕ್ಕೆ ಕಾಮಸೋವಸಂತನೋ, ಚಂದ್ರನೋ ದಿಟಕ್ಕೆ ವೇಳೆನೆ ವಿಭುಲಕ್ಷ್ಮೀದೇವ" ಎಂದು ಪ್ರೀತ್ಯಾದರದಿಂದ ಕರೆಯುತ್ತಿದ್ದರು.

ಒಂದನೆಯ ಲಕ್ಷ್ಮೀದೇವನನ್ನು "ರಟ್ಟರ ಕುಲಾಗ್ರಣಿ ಧರಣೀಪಟ್ಟಂ" ಎಂದು ಶಾಸನದಲ್ಲಿ ಹೇಳಲಾಗಿದೆ. ದಾನ ಧರ್ಮಾದಿಗಳಂತಹ ಸತ್ಕಾರ್ಯದಲ್ಲಿ ಎತ್ತಿದ ಕೈ ಬಲಿಚಕ್ರವರ್ತಿ ಬ್ರಾಹ್ಮಣನಿಗೆ ಭೂದಾನ ಮಾಡಿದಂತೆ. "ದಾನದೊಳೆ ಕೂಡಿವಾಮನ ರೂಪಂ ಧರಿಯಿಸದನೆಂದು ನಗುಗುಂ ಧರಣೀಪತಿ ಲಕ್ಷ್ಮೀದೇವ" ಹೆಸರಾಗಿದ್ದನೆಂದು ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ಕಾರಸ್ಥಾನದಲ್ಲಿ ಕೃಷ್ಣವಂತೆಯೂ ಶೌರ್ಯದಲ್ಲಿ ರುದ್ರವಂತೆಯೂ ದೇವತಾಂಶವಿತ್ತೆಂದು ಈ ಶಾಸನದಿಂದ ತಿಳಿದುಬರುತ್ತದೆ. "ಪದ್ಮಜನಂತಿರಿಲ್ಲದುದನಾ ಶ್ರೀ ಕೃಷ್ಣನಂತೆ ಇತ್ತೈದೆನೋಲ್ಪಡೆ ರಕ್ಷಿಪನಿಬೆಲ್ಲೆವಲ್ ನೆಗರ್ದರಂತಾಂ ರುದ್ರನಂತಿಕ್ಕುವಂ ಪಡೆಯಾತಂಗಳೆ ದೇವತಾಂಶ ರವಿನೀಶರ್ತಾವೆನಲ್ಪಕಲದೊಳ್‌ಪಡಿ ಲಕ್ಷ್ಮೀಧರ ಭೂಪಾಳ".

ಲಕ್ಷ್ಮೀದೇವನ ಪತ್ನಿ ಚಂದ್ರಿಕಾದೇವಿಯು ರಟ್ಟರ ಇತಿಹಾಸದಲ್ಲಿ ಬಹಳ ವಿಶೇಷವಾಗಿ ಕಂಗೊಳಿಸಿದ್ದಾಳೆ. ರಟ್ಟರ ರಾಜ್ಯದ ಸಂಸ್ಕೃತಿಯ ಯಶೋಭಿವೃದ್ಧಿಗಾಗಿ ಶ್ರಮಿಸಿದ್ದಾಳೆ. ಮತ್ತು ಅವಳು ಬಹುರೂಪವತಿಯೂ ಕಲಾನಿಪುಣೆಯೂ ಆಗಿದ್ದಳು. ಅವರಿಬ್ಬರ ಬಾಳು ಹಾಲುಜೇನು ಬೆರೆತಂತೆ ಸದಾ ಸಂತೋಷದಿಂದ ತುಂಬಿದ್ದಿತು. ಚಂದ್ರಿಕಾದೇವಿಯು ತನ್ನ ಸದ್ಗುಣಗಳಿಂದ ನಾಡಿನ ತುಂಬೆಲ್ಲಾ ಖ್ಯಾತಿವೆತ್ತಿದ್ದಳು. "ಲಕ್ಷ್ಮೀದೇನಾಜ್ಞಾಮಾತ್ರಂ ಆ ಮಹೀವಲ್ಲಭನ ಮನೋನಯನ ವಲ್ಲಭಿಯಂತೆನೆ ಶರಣಾಗತ ರಕ್ಷಾಮಣಿ ತರುಣೀಸುತೆ ಸಕಳ ವಿಭುದ ಚಿಂತಾಮಣಿ ಭಾಸುರ ನಿಜಗೋತ್ರ ಚಿಂತಾಮಣಿ. ವರ ಚಂದಲದೇವಿ ಪಟ್ಟರಾಣಿಯನಿಕ್ಕುಂ" ಎಂದು ಶಾಸನದಿಂದ ಅವಳ ವ್ಯಕ್ತಿತ್ವ ಗೊತ್ತಾಗುತ್ತದೆ. ಅವಳೆಂದರೆ "ನರಪತಿ ಲಕ್ಷ್ಮೀದೇವಸತಿ ಚಂದಲದೇವಿ ನಿಜೋದ, ಹಸ್ತದಿಂ ಧರೆಗೆಸೆಯಲ್ಕಿ ಸಂಸ್ಕರಣದೊಳ್ ಕುಡೆಕಾಂಚನಮಂ ಬೆರಳ್ಗೆಳೊಳ್ ಬೆರೆಸಿದ ಹೇಮ" ಎಂದು ಅವಳನ್ನು ಶಾಸನದಲ್ಲಿ ಬಾಯಿ ತುಂಬಾ ಹೊಗಳಿದ್ದಾರೆ. ಮತ್ತು ಜೈನಧರ್ಮಕ್ಕೆ ವಿಶೇಷವಾದ ಸೇವೆ ಸಲ್ಲಿಸಿ ಚಿರಸ್ಥಾಯಿಯಾಗಿದ್ದಾಳೆ." ಜೈನ ಮಹಾಮೃತಾಬ್ಧಿವರ್ಧನಕರ ಚಾರುಚಂದ್ರಿಕೆ ಮಹಾಸತಿ ಚಂದ್ರಿಕೆ ಧನ್ಯ ಧಾತ್ರಿಯೊಳ್ ಶ್ರೀಪತಿ ಲಕ್ಷ್ಮೀದೇವ ಮಹೀವಲ್ಲಭ ವಲ್ಲಭೆ" ಎಂದು ಅವಳನ್ನು ಶಾಸನದಲ್ಲಿ ಕೊಂಡಾಡಿದೆ.

ಒಟ್ಟಿನಲ್ಲಿ ಹೇಳಬೇಕಾದರೆ ರೂಪದೊಳು, ಗುಣದೊಳು, ಪತಿವ್ರತೆಯೊಳು ಭಾರತೀಯ ನಾರಿಯಲ್ಲಿರಬೇಕಾದಂತಹ ಸಕಲ ಲಕ್ಷಣ ಹೊಂದಿದವಳಾಗಿದ್ದಳು. "ರತಿಯಂ ರೂಪ ನೊಳುರ್ವಿಯಂ ಸ್ಥಿರತೆಯೊಳ್ಜಾತೆಯಂ ತಾಂ ಪತಿಬ್ರತದೊಳ್ ಶ್ರೀ ಸತಿಯಂ ಸುಭೋಗತೆಯೊಳಿಂದು ಸ್ತ್ರೀಯನಾಭೂಗ ದುಂನತಿಯೊಳ್ ಭಾರತೀಯ ಪ್ರುವೀಣತೆಯೊಳೆ ಶ್ರೀಚಂದ್ರಿಕದೇವಿ ಮಹಾಸತಿ" ಎಂದು ಶಾಸನದಲ್ಲಿ ಹೇಳಲಾಗಿದೆ. ಇದರ ಮೇಲಿಂದ ರಟ್ಟರ ಕಾಲದಲ್ಲಿ ಸ್ತ್ರೀಯರಿಗೆ ವಿಶೇಷ ಗೌರವದ ಸ್ಥಾನವಿತ್ತೆಂಬುದು ಗೊತ್ತಾಗುತ್ತದೆ.

ಒಂದನೆಯ ಲಕ್ಷ್ಮೀದೇವ ಕಾಲದಲ್ಲಿ ನೇಮಿಚಂದ್ರನೆಂಬ ಪ್ರಸಿದ್ಧ ಕವಿಯು ತನ್ನ ಮೊದಲನೆಯ ಕಾವ್ಯವಾದ 'ಲೀಲಾವತಿ' ಗ್ರಂಥದ ಕೊನೆಯಲ್ಲಿ "ಅಂಬುಡಿ ವೇಷ್ಟತಾವನಿಗೆ ಲಕ್ಷ್ಮಣದೇವನೇ ರಾಜನೆಂದು ಲೋಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೇ ದೇವಿಯೆಂದು ಸೇವ್ಯಂ ಬುಧ ನೇಮಿಚಂದ್ರನೇ ಕವೀಂದ್ರಂ" ಎಂದು ಆಶ್ರಯದಾತರಾದ ದಂಪತಿಗಳನ್ನು ಕೊಂಡಾಡಿದ್ದಾನೆ.

ಒಂದನೆಯ ಲಕ್ಷ್ಮೀದೇವ ಚಂದ್ರಿಕಾದೇವಿ ದಂಪತಿಗಳ ಉದರದಿಂದ ಜನಿಸಿದ ಕಾರ್ತವೀರ್ಯ ನಾಲ್ಕನೆಯ ಮತ್ತು ಮಲ್ಲಿಕಾರ್ಜುನರು ರಟ್ಟ ವಂಶದ ಕೀರ್ತಿಯನ್ನು ಮುಂದುವರಿಸಿಕೊಂಡು ಬಂದ ಮಹಾಶೂರರೂ, ಮೇಧಾವಿಗಳೂ ಆಗಿದ್ದರು. ಮಲ್ಲಿಕಾರ್ಜುನನು ಯುವರಾಜನಾಗಿದ್ದುಕೊಂಡು ರಾಜ್ಯಾಡಳಿತಕ್ಕೆ ಸಹಾಯ ಮಾಡಿದನು. "ಶ್ರೀ ಕಾರ್ತವೀರ್ಯದೇವಂ ನಿಜಾನುಜ ಯುವರಾಜ ವೀರಮಲ್ಲಿಕಾರ್ಜುನ ದೇವಂ ವೇಣುಗ್ರಾಮ ಸ್ಕಂದಾವಾರದೊಳ್ ಸುಖದಿಂ ಸಾಮ್ರಾಜ್ಯ ಲಕ್ಷ್ಮಿಯ ನನುಭವಿಸುತ್ತಮಿರೆ" ಎಂದು ಕಲ್ಲೊಳ್ಳಿ ಶಾಸನದಲ್ಲಿ ಹೇಳಲಾಗಿದೆ. ರಾಜಧಾನಿ ವೇಣುಗ್ರಾಮದ ಈ ವೇಳೆಗೆ ಸಂಪದ್ಭರಿತವಾದ ನಗರವಾಗಿದ್ದಿತು.

## ೨೦. ನಾಲ್ಮಡಿ ಕಾರ್ತವೀರ್ಯ–೧೧೦೦/೯೯

ರಟ್ಟ ಸಂತತಿಯ ಅತ್ಯಂತ ಸಮರ್ಥನಾದ ದೊರೆ ನಾಲ್ಮಡಿ ಕಾರ್ತವೀರ್ಯನು. ಇವನ ಕಾಲದಲ್ಲಿ ರಾಜ್ಯ ವಿಸ್ತರಣೆ ಸಂಸ್ಕೃತಿಯ ಬೆಳವಣಿಗೆಯೂ ಆಯಿತು. ಈ ದೊರೆಯು ಸ್ವತಂತ್ರವಾಗಿ ಸಾಮ್ರಾಜ್ಯವನ್ನು ಆಳುತ್ತಿದ್ದನು. "ಸಾಮ್ರಾಜ್ಯ ಲಕ್ಷ್ಮೀಯನ್ನನುಭವಿಸುತ್ತಮಿರೆ" ಎಂಬ ಮಾತಿನಿಂದ ಅವನು ಸ್ವತಂತ್ರ ದೊರೆಯಾಗಿದ್ದನೆಂದು ಹೇಳಬಹುದು. ರಟ್ಟ ರಾಜ ವೈಭವವು ಈ ಸಮಯದಲ್ಲಿ ಅತ್ಯುನ್ನತ ಮಟ್ಟವನ್ನು ಮುಟ್ಟಿದ್ದಿತು. ರಾಜ್ಯದಲ್ಲೆಲ್ಲಾ ಸುಖ, ಶಾಂತಿ ನೆಲಸಿತ್ತು. ಇವನ ರಾಣಿಯರಾಗಿದ್ದ ಏಚಲಾದೇವಿ ಮತ್ತು ಮಹಾದೇವಿಯರು ಸದ್ಗುಣ ಸಂಪನ್ನೆಯರೂ, ವಿವಿಧ ಕಲೆಗಳಲ್ಲಿ ನಿಪುಣೆಯರೂ ಆಗಿದ್ದರೆಂಬುದು ಈತನ ಕಾಲದ ಶಾಸನಗಳಿಂದ ತಿಳಿದುಬರುತ್ತದೆ.

ಚತುರ್ಭಾಷಾಕವಿ ಬಾಳಚಂದ್ರ ಕವಿಕಂದರ್ಪನು ರಚಿಸಿದ ಬೆಳಗಾವಿಯ ಶಾಸನದಲ್ಲಿ ನಾಲ್ಕನೆಯ ರಟ್ಟಕಾರ್ತವೀರ್ಯನು – ವೀರಮಲ್ಲಿಕಾರ್ಜುನನೊಂದಿಗೆ ವೇಣುಗ್ರಾಮದ ಸ್ಕಂದಾಹಾರದಲ್ಲಿದ್ದು ಕರುಣಾಗ್ರ ಗಣ್ಯಾತೀತರಾಜನು ಮಾಡಿಸಿದ ರಟ್ಟ ಜಿನಾಲಯದ ಶಾಂತಿನಾಥ ಜಿನಾಲಯಕ್ಕೆ ಕೆಲ ಭೂಮಿಯನ್ನು ದತ್ತಿಯಾಗಿ ಬಿಟ್ಟಂತೆಯೂ ಒಂದರಲ್ಲಿ ಹೇಳಿದರೆ, ಮತ್ತೊಂದರಲ್ಲಿ ನಾಲ್ಮಡಿ ಕಾರ್ತವೀರ್ಯನೇ, ಆ ಬಸದಿಗೆ ಕೊಂವಳ್ಳಿ ಕಂಪಣದ ಉಂಬರವಾಣಿ ಗ್ರಾಮವನ್ನು ಮತ್ತು ನಾಡೊಳಗೆ ಅಲ್ಲಲ್ಲಿ ದತ್ತಿಗಳನ್ನು ಬಿಟ್ಟಂತೆ ಹೇಳಿದೆ.

ಪಾರ್ಶ್ವಪಂಡಿತನ ಕಲ್ಲೊಳ್ಳಿ ಶಾಸನದಲ್ಲಿ "ಕುಹುಂಡಿ ಮಂಡಲದ ವೇಣುಗ್ರಾಮದಲ್ಲಿ ರಟ್ಟಾನ್ವಯ ರಾಜರಾದ ನಾಲ್ಕನೆಯ ಕಾರ್ತವೀರ್ಯ ಮಲ್ಲಿಕಾರ್ಜುನರೆಂಬ ಸಹೋದರರು

ಆಳುತ್ತಿದ್ದಂತೆ ಬಿಟ್ಟಂತೆಯೂ ಹೇಳಿದೆ. ಈ ಕಾರ್ತವೀರ್ಯನು "ಸಮರಾದಿತ ಮಹಾಲಿಂಗ"ನೆಂದು ಜನರಿಂದ ಹೊಗಳಿಸಿಕೊಂಡಿದ್ದಾನೆ.

ಪಾರ್ಶ್ವಪಂಡಿತನ ಕಲ್ಹೊಳ್ಳಿ ಶಾಸನ ಈತನ ಕಾಲದಲ್ಲಿಯೇ ನಿರ್ಮಿಸಿದ್ದು, ಅದರಲ್ಲಿ ರಟ್ಟರ ನಾಲ್ಕು ತಲೆಮಾರಿನ ರಾಜಾವಳಿಯನ್ನು ಹೇಳಲಾಗಿದೆ. ಇದರಿಂದ ರಟ್ಟರ ಇತಿಹಾಸ ರಚನೆಗೆ ಸಾಕಷ್ಟು ಸಹಾಯವಾಗಿದೆ. ನಾಲ್ಕನೆಯ ಕಾರ್ತವೀರ್ಯ ತಾಯಿ ಚಂದ್ರಿಕಾದೇವಿ ವಂಶಾವತಾರವನ್ನೂ ಆ ಶಾಸನದಲ್ಲಿ ಹೇಳಲಾಗಿದೆ.

ಕವಿ ಜನ್ನನ ಸಮಕಾಲೀನನಾದ ಈ ಪಾರ್ಶ್ವಪಂಡಿತನು ಕ್ರಿ.ಶ.ಸು. ೧೨೨೮ ರಲ್ಲಿ ಪಾರ್ಶ್ವನಾಥ ಪುರಾಣವನ್ನು ಚಂಪೂಕಾವ್ಯದಲ್ಲಿ ೧೬ ಆಶ್ವಾಸಗಳಲ್ಲಿ ರಚಿಸಿದ್ದಾನೆ. ಅದರಂತೆ ೨ನೇ ಗುಣವರ್ಮನು ಪುಷ್ಪದಂತ ಪುರಾಣವನ್ನೂ ಹಾಗೂ ಚಂದ್ರನಾಥಾಷ್ಟಕವನ್ನೂ ರಚಿಸಿದ್ದಾನೆ. ಈ ಆಧಾರಗಳ ಮೇಲಿಂದ ನಾಲ್ಕನೆಯ ಕಾರ್ತವೀರ್ಯನು ಕಲೆ, ವಾಸ್ತುಶಿಲ್ಪ ಹಾಗೂ ಸಾಹಿತ್ಯವನ್ನು ಸಾಕಷ್ಟು ಪೋಷಿಸಿದ್ದನೆಂದು ಹೇಳಬಹುದು.

ಇವನ ಕಾಲದಲ್ಲಿ ರಾಜಧಾನಿಯಾದ ಬೆಳಗಾವಿಯು ಸಂಪದ್ಭರಿತವಾದ ಪ್ರಾಂತವಾಗಿತ್ತು. ಅಲ್ಲಿಗೆ ಲಾಟ, ಕೇರಳ ಮೊದಲಾದ ದೇಶಗಳಿಂದ ವ್ಯಾಪಾರಿಗಳು ಬರುತ್ತಿದ್ದರು. "ಕಾರ್ತವೀರ್ಯನೃಪಂ ಪೋಲ್ವನರೀ ಧಾತ್ರಿಯೊಳ್ ಇಂತೆಸೆವೀನ್ನೃಪಾಳ ಸಾಳ್ವ ರಾಜಧಾನಿಯಂತಪ್ಪದೇನೇಂ ಪೋಲ್ವನರೀ ಧಾತ್ರಿಯೊಳ್ ಇಂತೆಸೆವೀನ್ನೃಪಾಳ ಸಾಳ್ವ ರಾಜ್ಯಧಾನಿಯಂತಪ್ಪದೇನೇಂ. ಏನಸಂ ಲೋಕಕ್ಕೆ ಸರ್ವರ್ತುಕ ವನ್ನಿ ಫಳವಾತ ದಿಂದೊಪ್ಪುವೆಪ್ಪತ್ತೇನೆ ಸಂದಿರ್ಪೊಗಗಳಿಂದ ಶೋಬಿಪ ಸುರಪುರ ಭೋಗಾವತೀ ಪ್ರಖ್ಯಾವೀ ಮೇಧಿನಿಯೋಳ್ತಾನೆಂಬ ಪೆಂಪಂ ತಳೆದಖಿಳ ಗುಣೋತ್ಕರ್ಷದಿಂ ಖ್ಯಾತಿ ವೆತ್ತತ್ತೆನೆ ವೇಣುಗ್ರಾಮೆಯೊಪ್ಪಂ ಬಡೆದುದು ಸಕಳೈಸ್ವರ್ಯ್ಯ ಭೋಗಂಗಳಿಂದಂ ಇಂತು ವಸಂತ ಪುರ ದಂತನಂತ ವಿಳಾಸದಿಂದ ಸಂತತಂ ಮೆರೆವ ವೇಣು ಪುರದೊಳ್ ಸುಖದಿಂದ ರಾಜ್ಯಂಗೆಯುತ್ತಮಿರೆ" ಎಂದು (ಬೆಳಗಾವಿ) ವೇಣುಗ್ರಾಮವನ್ನು ಶಾಸನದಲ್ಲಿ ವರ್ಣಿಸಲಾಗಿದೆ. ಮುಂದೆ ಇವನ ಮಗನಾದ ಇಮ್ಮಡಿ ಲಕ್ಷ್ಮೀದೇವನು ಪಟ್ಟಕ್ಕೆ ಬಂದನು.

### ೨೧. ಇಮ್ಮಡಿ ಲಕ್ಷ್ಮೀದೇವ (ಕಾಲ ಸು. ೧೨೨೮)

ಇಮ್ಮಡಿ ಲಕ್ಷ್ಮೀದೇವನು ಬಾಲ್ಯದಿಂದಲೇ ಯುದ್ಧ ಕಲೆಯಲ್ಲಿ ಪ್ರವೀಣನಾಗಿದ್ದನು. ತಂದೆಯ ಕಾರ್ಯಕ್ಕೆ ಸಹಾಯಕನಾಗಿ "ಬೊಪ್ಪನು ಸಿಂಗ" ಎಂದು ಬಿರುದು ಪಡೆದಿದ್ದನು.

ಲಕ್ಷ್ಮೀದೇವನು ಬಹು ಪರಾಕ್ರಮಿಯಾದ ದೊರೆ. ತನ್ನ ಪರಾಕ್ರಮದಿಂದ "ರಟ್ಟರಾಜ್ಯ ಪ್ರತಿಷ್ಠಾನಾಚಾರ್ಯ" ಎಂದು ಬಿರುದು ಧರಿಸಿದ್ದನು. ಇವನಿಗೆ ಮುನಿಚಂದ್ರನು ಶಸ್ತ್ರಶಾಸ್ತ್ರ ಶಿಕ್ಷಾ ಗುರುವಾಗಿಯೂ, ಸಚಿವನಾಗಿಯೂ ಇದ್ದನು. ಇವನ ಆಸ್ಥಾನದಲ್ಲಿ ಶಾಂತಿನಾಥ, ನಾಗ, ಮಲ್ಲಿಕಾರ್ಜುನ ಎಂಬುವವರು ಅಮಾತ್ಯರಿದ್ದರು. ಎರಡನೆಯ ಲಕ್ಷ್ಮೀದೇವನು ಶತ್ರು ಸೈನ್ಯಕ್ಕೆ ಭೀಮನಂತೆ ಮೃತ್ಯುಪ್ರಾಯನಾಗಿದ್ದು ಅವನ ಅಹಂಕಾರವನ್ನು ಮುರಿದನೆಂದು ಶಾಸನಗಳಿಂದ ತಿಳಿದುಬರುತ್ತದೆ.

ಈ ದೊರೆಗೆ ಸಮರ್ಥನಾದ ರಾಜತಂತ್ರ ನಿಪುಣನಾದ ಮುನಿಚಂದ್ರ ಮುನಿಯು ಲಭಿಸಿದ್ದು ಒಂದು ಭಾಗ್ಯವೆನ್ನಬೇಕು. "ಲಕ್ಷ್ಮಿನಾರೀಶಂ ರಟ್ಟರಾಜಗುರು ಮುನಿಚಂದ್ರಂ ಕುಮುದಾನಂದತೆಯಿಂದವೊಂದಿ ಮುನಿಚಂದ್ರಂ ಶತ್ರುಭೂಭೃನ್ಮುಖಾಬ್ಬಮುನಿರ್ಪೊಡಿಪ" ಎಂದು ಶಾಸನದಿಂದ ತಿಳಿದುಬರುತ್ತದೆ. ಮುನಿಚಂದ್ರನು ಉಭಯಕವಿಯು ಆಗಿದ್ದಾನೆಂದು ಇತಿಹಾಸದಿಂದ ಗೊತ್ತಾಗುತ್ತದೆ.

೨ನೇ ಗುಣವರ್ಮನಿಗೂ ಮುನಿಚಂದ್ರನು ಗುರುವಾಗಿದ್ದನು. ಅವನ ಪುಷ್ಪದಂತ ಪುರಾಣದಲ್ಲಿ "ಉಭಯ ಕವಿಮೂಲಗರ್ಭ" ಎಂದು ಸ್ತುತಿಸಿದ್ದಾನೆ.

ಇಮ್ಮಡಿ ಲಕ್ಷ್ಮೀದೇವನು ಸುಗಂಧವರ್ತಿ (ಇಂದಿನ ಸೌಂದತ್ತಿ) ನಗರದ ಹೊರ ವಲಯದಲ್ಲಿ ನಾಗರ ಕೆರೆಯ ಬಳಿ ತನ್ನ ತಂದೆಯ ಹೆಸರಿನ ಸ್ಮರಣಾರ್ಥವಾಗಿ ಮಲ್ಲಿನಾಥ ದೇವಾಲಯವನ್ನು ಕಟ್ಟಿಸಿದನು. ಮತ್ತು ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯಕ್ಕೆ ಮೂರು ಬಾರಿ ಯಾತ್ರೆಗೆ ಹೋಗಿ ಆ ಪವಿತ್ರ ಪರ್ವತದ ಶಿಲಾರಚಿತ ಲಿಂಗವನ್ನು ತಂದು ಮಲ್ಲಿನಥ ದೇವಾಲಯದಲ್ಲಿ ಪ್ರತಿಷ್ಠಾಪನೆ ಮಾಡಿದನು."[೩೨]

ಮುನಿಚಂದ್ರ ನಿಯಮದಂತೆ ಮಾದಿರಾಜನ ತಂದೆಯು ಇಮ್ಮಡಿ ಲಕ್ಷ್ಮೀದೇವ ನಿರ್ಮಿತ ಮಲ್ಲಿನಾಥ ದೇವಾಲಯಕ್ಕೆ ದತ್ತಿ ಬಿಟ್ಟನು. ಲಕ್ಷ್ಮೀದೇವನ ಆಡಳಿತವು ಸುಖಶಾಂತಿಯಿಂದ ಕೂಡಿದ್ದಿತು. ರಾಜ್ಯಾಡಳಿತದಲ್ಲಿ ಒಳ್ಳೇ ನುರಿತವನೂ, ದಕ್ಷ ಆಡಳಿತಗಾರನೂ ಆಗಿದ್ದನು.

"ಶ್ರೀಶೈಳದ ಮಲ್ಲಿಕಾರ್ಜುನದೇವರಂ ಮುರುಸೊೞ್ದರ್ಶನಂ ಮಾಡಿ ತತ್ಪ್ರೀತಿಯಿಂಪರ್ವತಲಿಂಗಮಂ ತಂದು ಕುಹುಂಡಿ ಮೂರು ಸಾಸಿರದ ಬಳಿಯ ಕಂಪಣಂ ಸುಗಂಧವರ್ತಿ ಹನ್ನೆರಡರ ಮೊದಲಬಾಡಂ ಶ್ರೀಮದ್ರಾಜಗುರುಗಳೆ ಮುನಿಚಂದ್ರ

ದೇವರಾಳ್ಕೆವಾಡಂ ಪಟ್ಟಣಂ ಸುಗಂಧವರ್ತಿಯ ಹೇರವೊಳಲ್ ನಾಗರ ಕೆರಿಯಲಿ ತನ್ನ ತಂದೆ ಮಲ್ಲಿಕಾರ್ಜುನನ ಹೆಸರೊಳ್ ಶ್ರೀಮಲ್ಲಿನಾಥದೇವರ ಪ್ರತಿಷ್ಠೆಯಂ ಮಾಡಿ" ಎಂದು ರಟ್ಟರಸರ ಬಗ್ಗೆ ತಿಳಿದುಬರುತ್ತದೆ.

## ೨.೩ ರಟ್ಟರ ಸಾಮಂತರು

ರಟ್ಟರು ಮೊದಲು ಸಾಮಂತರಾಗಿದ್ದರು. ನಂತರ ತಮ್ಮ ಪರಾಕ್ರಮ ಹಾಗೂ ದಕ್ಷ ಆಡಳಿತದಿಂದ ಬಹುಬೇಗ ಮಹಾಮಾಂಡಲೀಕರಾಗಿ ನಂತರ ತಾವೇ ಸ್ವತಂತ್ರರಾಗಿ ಆಳಲು ಪ್ರಾರಂಭಿಸಿದರು. ಮುನ್ನೂರು ವರ್ಷಗಳ ಕಾಲ ಜನರು ಮೆಚ್ಚುವಂತೆ ನಾಡಿನಲ್ಲೆಲ್ಲಾ ಶಾಂತಿ ಹಾಗೂ ಸುಭದ್ರತೆಯನ್ನು ಸ್ಥಾಪಿಸಿದರು. ಅವರು ಸ್ವತಂತ್ರವಾಗಿ ಆಳಿದ್ದು ಮಾತ್ರವಲ್ಲದೆ ಅವರನ್ನಾಶ್ರಯಿಸಿದ್ದ ಸಾಮಂತರೂ ಕೂಡ ರಟ್ಟರಂತೆ ಸಾಹಿತ್ಯ ಕಲೆಗಳಿಗೆ ಪ್ರೋತ್ಸಾಹ ನೀಡಿ ಶಾಂತಿ ಸುಭೀಕ್ಷೆಯಿಂದ ಜನತೆ ನೆಮ್ಮದಿಯಿಂದ ಬಾಳುವಂತೆ ಮಾಡಿದರು. ರಟ್ಟರ ಸಾಮಂತರಲ್ಲಿ ಪ್ರಮುಖರಾದವರೆಂದರೆ – (೧) ಹಗರಟೆಯ ಯದುವಂಶದ ನಾಯಕರು (೨) ಕೋಲಾರದ ಪ್ರಭುಗಳು (೩) ಬನಹಟ್ಟಿಯ ನಾಯಕರು (೪) ಕೊಂಡನೂರಿನ ಹಳ್ಳಿಊರುಗಳು (೫) ನೇಸರಗಿಯ ನಾಯಕರು, ರಾಯಬಾಗದ ಹಮ್ಮು.

### (೧) ಹಗರಟೆಯ ಯದುವಂಶದ ನಾಯಕರು

ಹಗರಟೆಯ ಯದುವಂಶದ ನಾಯಕರಲ್ಲಿ 'ಒಂದನೆಯ ರಾಜನು' ಬಹು ಜನಪ್ರಿಯನಾಗಿದ್ದನು. ಇವನ ಆಳ್ವಿಕೆಯಲ್ಲಿ ಜನರು ಸದಾ ಸಂತೃಪ್ತರಾಗಿದ್ದರು. ಇವನ ಕಾಲಕ್ಕೆ ಜೈನಮತಕ್ಕೆ ವಿಶೇಷ ಪ್ರೋತ್ಸಾಹ ದೊರಕಿತು. ೧ನೆಯ ರಾಜನ ಮಗನಾದ ಒಬ್ಬ ಪರಾಕ್ರಮಿಯಾದ ಅರಸನಾಗಿದ್ದನು. ಅವನ ಸತಿ ಬಾಗಲದೇವಿಯು ಉದಾರಿಯೂ, ಧರ್ಮಾತ್ಮಳೂ ಆಗಿದ್ದಳು. ಆಕೆಯು ವಿದ್ವಜ್ಜನರಿಗೆ ಉತ್ತೇಜನ ನೀಡುತ್ತಿದ್ದಳು. ತರುವಾಯ ಆಳಿದ ಇಮ್ಮಡಿ ರಾಜನು ಈ ವಂಶದ ನಾಯಕರಲ್ಲಿ ಅತ್ಯಂತ ಪ್ರಖ್ಯಾತನಾದವನು, ಜೈನಧರ್ಮದ ತತ್ವದ ಪ್ರಕಾರ ಅತೀ ಸರಳವಾದ ಜೀವನವನ್ನು ನಡೆಸಿದನು. ಮತ್ತು ಸಾಹಿತ್ಯ ಕಲೆಗಳಿಗೂ ಅವನು ಪೋಷಕನಾಗಿದ್ದನು. ಹಗರಟೆಯ ಜ್ಞಾನಿಗಳಿಂದ, ಸಾಹಿತಿಗಳಿಂದ, ಸಂಪತ್ತಿನಿಂದ ಕೂಡಿ ಕಂಗೊಳಿಸುತ್ತಿತ್ತು. ಮತ್ತು ವಿದ್ವಾಂಸರ ಮನೋಭೀಷ್ಟಗಳನ್ನು ಪೂರೈಸುತ್ತಿದ್ದು, ದೊರೆಗಳೆಂದು ಅವರನ್ನು ಎಲ್ಲರೂ ಹೊಗಳುತ್ತಿದ್ದರೆಂದು ಶಾಸನ ಹೇಳುತ್ತದೆ.

(೨) ಯದುವಂಶದ ನಾಯಕರು

ಕೋಲಾರದ ಪ್ರಭುಗಳಲ್ಲಿ ಮಾದಿರಾಜನು ಹೆಸರಾಂತ ಅರಸನೆನಿಸಿಕೊಂಡಿದ್ದನು. ಇವನು ತನ್ನ ಶೌರ್ಯ ಸಾಹಸಗಳಿಂದಾಗಿ ಎಲ್ಲೆಲ್ಲೂ ಖ್ಯಾತಿ ಗಳಿಸಿದ್ದನು. ಮಾದಿರಾಜ ಸೋದರಿ ಬಿಜ್ಜಿಯವ್ವೆಯು ಸ್ವಲ್ಪ ಕಾಲ ಕೋಲಾರದಲ್ಲಿ ರಾಜ್ಯಾಡಳಿತ ನಡೆಸಿ ಎಲ್ಲರ ಮೆಚ್ಚುಗೆಗೆ ಪಾತ್ರಳಾದಳು.

(೩) ಬನಹಟ್ಟಿಯ ನಾಯಕರು

ರಟ್ಟರ ಅಧೀನದಲ್ಲಿದ್ದು ನಾಯಕರಲ್ಲಿ ಬನಹಟ್ಟಿಯ ನಾಯಕರು ಬಹುಮುಖ್ಯರಾದರು. ಇವರಲ್ಲಿ ರುದ್ರಭಟ್ಟನೆಂಬ ಒಬ್ಬ ಹೆಸರಾಂತ ಕವಿಯೂ ಇದ್ದಾನೆಂಬುದು ಶಾಸನದಿಂದ ಗೊತ್ತಾಗುತ್ತದೆ. ಇವನ ತರುವಾಯ ಕಲಿದೇವನೆಂಬ ಪರಾಕ್ರಮಿಯಾದ ನಾಯಕನು ಆಡಳಿತ ನಡೆಸಿದನು. ಈ ಸಂತತಿಯ ಮಹಾದೇವ, ಕೇಶಿರಾಜ ಮೊದಲಾದವರು ಶೌರ್ಯ ಸಾಹಸಗಳನ್ನು ಮೆರೆದು ಹೆಸರುವಾಸಿಗಳಾಗಿದ್ದಾರೆ.

(೪) ಕೊಂಡನೂರಿನ ಹಳ್ಳಿಊರುಗಳು

ಕೊಂಡನೂರಿನ ಹಳ್ಳಿಊರರು ಮನೆತನದಲ್ಲಿ ಸೋರಿಗಂಕನು ಮುಖ್ಯನಾದವನು. ಈತನು ಸಾಹಿತ್ಯ ಪ್ರೇಮಿಯಾಗಿದ್ದು, ವಿದ್ವಾಂಸರಿಗೆ ವಿಶೇಷ ಸ್ಥಾನ ಕೊಟ್ಟಿದ್ದನು. ಈ ವಂಶದ ನಾಯಕರು ವಿಶೇಷವಾಗಿ ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದರು.

(೫) ನೇಸರಗಿಯ ನಾಯಕರು

ನೇಸರಗಿಯ ನಾಯಕರು ರಟ್ಟರ ಅಧೀನದಲ್ಲಿದ್ದವರು ಹಬ್ಬೆಯ ನಾಯಕ ಅವರಲ್ಲಿ ಮೊದಲನೆಯವರು. ಅವನ ಮಗ ಬಾಚಯ್ಯನಾಯಕನು ಬಲು ಪರಾಕ್ರಮಿಯಾಗಿದ್ದನು. ರಟ್ಟರಲ್ಲಿ ಪ್ರಸಿದ್ಧ ದೊರೆಯಾದ ನಾಲ್ಮಡಿ ಕಾರ್ತವೀರ್ಯನು ಯುದ್ಧದಲ್ಲಿ ಇವನ ನೆರವನ್ನು ಪಡೆದನು. ಬಾಚಯ್ಯನಾಯಕನ ಸತಿ ಮಾಯಾದೇವಿ ದಾನಶೀಲಳಾಗಿ ಖ್ಯಾತಿ ಗಳಿಸಿದ್ದಾಳೆ. ಇವರ ಕಾಲದಲ್ಲಿ ನೇಸರಗಿಯಲ್ಲಿ ಹಲವಾರು ದೇವಾಲಯಗಳು ನಿರ್ಮಾಣಗೊಂಡವು.

## ೨.೫ ರಟ್ಟರ ಅವನತಿ

ಸವದತ್ತಿ ರಟ್ಟರ ಚರಿತ್ರೆಯು ಕ್ರಿ.ಶ.ಸು. ೧೦ನೇ ಶತಮಾನದಿಂದಲೇ ಪ್ರಾರಂಭವಾದರೂ ಸೇವುಣರಿಗೂ ರಟ್ಟರಿಗೂ ರಾಜಕೀಯ ಸಂಬಂಧಗಳು ಪ್ರಾರಂಭವಾದುದು ಸು. ೧೨೨೦ ರಿಂದ ಕ್ರಿ.ಶ. ೧೨೦೦ ರಲ್ಲಿ ಪಟ್ಟಕ್ಕೆ ಬಂದ ಸೇವೂಣರ ಸಿಂಘಣನು ಕೊಲ್ಹಾಪೂರದಲ್ಲಿ ಆಳುತ್ತಿದ್ದ ಭೋಜನನ್ನು ಸೋಲಿಸಿದನು. ಭೋಜನ ನೆರೆಯವರೇ ಆದ ರಟ್ಟರು ಸೇವುಣರಿಂದ

ತಪ್ಪಿಸಿಕೊಳ್ಳುವದು ಸಾಧ್ಯವಾಗಲಿಲ್ಲ. ಆಗ ಎರಡನೆಯ ಲಕ್ಷ್ಮೀದೇವನು ರಟ್ಟ ರಾಜನಾಗಿದ್ದನು. ಸಿಂಘನಿಗೂ ರಟ್ಟರಗೂ ಘರ್ಷಣೆಗಳು ನಡೆದವು.

ಸಿಂಘಣನು ಶಿಲಾಹಾರ ಭೋಜನನ್ನು ಸೋಲಿಸಿದ್ದುದನ್ನು ನೋಡಿದ ರಟ್ಟರ ಎರಡನೆಯ ಲಕ್ಷ್ಮೀದೇವನು ಯುದ್ಧದ ಗೊಡವಿಗೆ ಹೋಗದೇ ಸೋಲೊಪ್ಪಿಕೊಂಡನು. ಸಿಂಘಣನು ನಿಶ್ಚಿಂತೆಯಿಂದ ಉತ್ತರ ಭಾರತದ ಕಡೆಗೆ ದಿಗ್ವಿಜಯನ್ನು ಕೈಕೊಂಡಾಗ ಎರಡನೆಯ ಲಕ್ಷ್ಮೀದೇವನು ಸ್ವತಂತ್ರವಾಗಿ ಮತ್ತೆ ಶಾಸನಗಳನ್ನು ತನ್ನ ಹೆಸರಿನಿಂದ ಬರೆಯಿಸಲು ಪ್ರಾರಂಭಿಸಿದನು.

ತಾನಿಲ್ಲದ ಸಮಯ ಸಾಧಿಸಿಕೊಂಡು ಸ್ವತಂತ್ರವಾಗಿರುವ ಒಂದನೆಯ ಲಕ್ಷ್ಮೀದೇವನನ್ನು ಕಂಡು ಕೋಪಗೊಂಡ ಸಿಂಘಣನು ತನ್ನ ಶೂರ ಸೇನಾಪತಿಯಾದ ಬೀಚಣ್ಣನೆನ್ನುವವನನ್ನು ರಟ್ಟ ರಾಜ್ಯದ ಮೇಲೆ ಸೈನ್ಯ ಸಮೇತ ಕಳುಹಿಸಿದನು. ಈ ಯುದ್ಧದಲ್ಲಿ ಅವನು ಎರಡನೆಯ ಲಕ್ಷ್ಮೀದೇವನನ್ನು ಸೋಲಿಸಿದನು. ಈ ಯುದ್ಧದಲ್ಲಿ ಎರಡನೆಯ ಲಕ್ಷ್ಮೀದೇವನು ಮಡಿದಂತೆ ತಿಳಿದುಬರುತ್ತದೆ. ಮತ್ತು ಸಿಂಘಣನ ಮರಣಾನಂತರ ರಟ್ಟರಿಗೂ ಸೇವುಣರಿಗೂ ಯುದ್ಧವಾಗಿರಬಹುದೆಂದು ಇತಿಹಾಸಕಾರರು ಹೇಳುತ್ತಾರೆ.

ಎರಡನೆಯ ಲಕ್ಷ್ಮೀದೇವನ ಬಂಧುವಾದ ಕದಂಬ ೩ನೇ ಷಷ್ಟದೇವನು ಸೇವುಣರ ಕೃಷ್ಣನ ಮೇಲೆ ಯುದ್ಧಕ್ಕೆ ಹೋಗಲು ಸಹಾಯ ಮಾಡಿದನು. ಆದರೆ ಕೃಷ್ಣನ ಮಹಾಪ್ರಧಾನವಾದ ನಾಗರಸನು ರಟ್ಟರಸರನ್ನು ಸಂಪೂರ್ಣ ಸೋಲಿಸಿ, ಆ ಪ್ರಾಂತವನ್ನು ಸೇವುಣರ ಆಳ್ವಿಕೆಗೆ ತಕ್ಕೊಂಡನು ಎಂದು ಗೊತ್ತಾಗುತ್ತದೆ.

ಮುಂದೆ ಕುಹುಂಡಿ ಮೂರು ಸಾಸಿರವು ಸಂಪೂರ್ಣವಾಗಿ ಸೇವುಣರ ಕೈ ಸೇರಿತು. ಎರಡನೆಯ ಲಕ್ಷ್ಮೀದೇವನ ತರುವಾಯ ಯಾವ ರಟ್ಟರಾಜನ ಹೆಸರು ತಿಳಿದುಬಂದಿಲ್ಲಾ. ಬಹುಶಃ ಅವನೇ ರಟ್ಟರ ಸಂತತಿಯ ಕೊನೆಯ ಅರಸನಿರಬಹುದು ಎಂದು ಊಹಿಸಬಹುದು.

## ಅಡಿಟಿಪ್ಪಣಿಗಳು :

೧. ಎಸ್.ಆರ್. ಗುಂಜಾಳ (ಸಂ.), **ಬೆಳಗಾವಿ ಬೆಳಕು,** ಅಖಿಲ ಭಾರತೀಯ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾವಿ – ೨೦೦೩, ಪು. ೨೪–೨೬

೨. ದಿನಕರ ದೇಸಾಯಿ, **ಮಹಾಮಂಡಳೇಶ್ವರ ಅಂಡರ್ ದಿ ಚಾಲುಕ್ಯಾಸ್,** ಇತಿಹಾಸ ಮಂಡಲ, ಧಾರವಾಡ – ೧೯೮೧, ಪು.ಸಂ. ೧೫೦

೩. ಪಾಟೀಲ ಎಸ್.ಬಿ, **ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ,** ಬಸವಶ್ರೀ ಪ್ರಕಾಶನ, ಸಂಕೇಶ್ವರ – ೧೯೯೫, ಪು.ಸಂ.೧೦

೪. ಹಿರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ, **ಕನ್ನಡ ಶಾಸನ ಸಂಪದ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೯೪, ಪು. ೧೨೪

೫. ಹಂಪನಾ, **ಚಂದ್ರಕೋಡೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ – ೧೯೯೭, ಪು.ಸಂ. ೩೫

೬. **JBBRAS** Vol.-X P-194. (ಶಾ.ಸಂ.೧೧)

೭. ಹಂಪನಾ, **ಪೂರ್ವೋಕ್ತ,** ಪು. ೩೭

೮. **JBBRAS** Vol.-X P-204.

೯. **ಅದೇ,** ಪುಟ ೨೦೪

೧೦. **ಅದೇ,** ಪುಟ ೨೦೪

೧೧. **ಅದೇ,** (ಶಾ.ಸಂ.೬,೭,೮,)

೧೨. ಪಾಟೀಲ ಎಸ್.ಬಿ, **ಪೂರ್ವೋಕ್ತ,** ಪು. ೧೨

೧೩. ಕಾಮತ್ ಸೂರ್ಯನಾಥ (ಸಂ.), **ಬೆಳಗಾವಿ ಜಿಲ್ಲಾ ಗೆಜೆಟಿಯರ್,** ಕರ್ನಾಟಕ ಸರ್ಕಾರ – ೧೯೮೭, ಪು.೯೦

೧೪ **ಅದೇ** ಪುಟ ೯೦

೧೫ **Epigraphia Indica**. Vol-XVI PP-8

೧೬. **JBBRAS** Vol-X, P-196, 217, 218

೧೭ **JBBRAS** Vol-X, P-194 (ಶಾ.ಸಂ. ೩೨, ೩೩)

೧೮. **Karnataka Inscriptions**. Vol-V. P-204 KRI. KUD

೧೯. **JBBRAS**. Vol-X, P-194

೨೦. **Indian Antiquary,** Vol.XXIX, P-161

೨೧. ಉಪಾಧ್ಯೆ ಎ.ಎನ್, **ಉಪಾಧ್ಯೆ ಪೇಪರ್ಸ್**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, – ೨೦೦೦, ಪು. ೧೯೫

೨೨. ARIE No-378 (B) P-88, 1960-61, KRI KUD.

೨೩. Kundanagar K.G , **Inscriptions in Northern Karnataka and the Kolhapur State**, No. 2,3 p.105

೨೪. ಪಾಟೀಲ ಎಸ್.ಬಿ, **ಪೂರ್ವೋಕ್ತ**, ಪು. ೨೪

೨೫. JBBRAS. Vol-X, P-214

೨೬. Annigeri A.M, **The Descriptive list of the Copper Plates Examind in the 1941- 42** No.49 P-21

೨೭. ದಿನಕರ ದೇಸಾಯಿ, **ಪೂರ್ವೋಕ್ತ**, ಪು ೧೬೫

೨೮. ಬಿ.ಆರ್. ಹುಂದೂರು, **ಜೈನ ಪರಂಪರೆಗೆ ಬೆಳಗಾವಿ ಜಿಲ್ಲೆಯ ಪ್ರಾದೇಶಿಕ ಕೊಡುಗೆ**, ಪ್ರಕಾಶಕರು ಬಿ.ಆರ್. ಹುಂದೂರು ಹುಕ್ಕೇರಿ, – ೨೦೦೩, ಪು. ೫೦

೨೯. ಕೆ.ಜಿ. ಕುಂದಣಗಾರ, **ರಾಯಬಾಗ ಶಾಸನ ನಂ**, ೧೦೫ ಪ್ರಕಾಶಕರು ಕೆ.ಜಿ. ಕುಂದಣಗಾರ (ಕಾಲ ಸು. ೧೧೨೭)

೩೦. ಎಂ.ವ್ಹಿ. ಶ್ರೀನಿವಾಸ, **ಸೌಂದತ್ತಿ ರಟ್ಟರು**, ಪ್ರಕಾಶನ ಎಂ.ವ್ಹಿ. ಶ್ರೀನಿವಾಸ, ಸವದತ್ತಿ – ೧೯೮೩ ಪು. ೧೬

೩೧. ಎಂ.ವ್ಹಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ, **ಕರ್ನಾಟಕ ಇತಿಹಾಸ ದರ್ಶನ**, ಇತಿಹಾಸ ಅಕಾಡೆಮಿ ಬೆಂಗಳೂರು – ೧೯೮೭ ಪು. ೩೦೫

# ಅಧ್ಯಾಯ–೩ ಧಾರ್ಮಿಕ ವ್ಯವಸ್ಥೆ

೩.೧ ವೈಷ್ಣವರು

೩.೨ ಶೈವರು

೩.೩ ಪಾಶುಪಥ

೩.೪ ಲಕುಲೀಶ

೩.೫ ಕಾಳಾಮುಖ

೩.೬ ಜೈನರು

## ಅಧ್ಯಾಯ –೩

# ಧಾರ್ಮಿಕ ವ್ಯವಸ್ಥೆ

ದೇವರ ಸ್ವರೂಪಕ್ಕೆ ಧರ್ಮವೇ ನಿರ್ಣಾಯಕ ಶಕ್ತಿಯಂ ಶಿಸ್ತು. ಧರ್ಮವನ್ನು ತನ್ನ ಜೀವನದ ಎಲ್ಲ ರಂಗಗಳಲ್ಲಿಯೂ ಧರ್ಮವೇ ಹಾಸುಹೊಕ್ಕಾಗಿ ಪರಿಣಿಮಿಸುವಂತಿತ್ತು. ಊರಲ್ಲಿ ಎಲ್ಲ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳ ಕೇಂದ್ರ ಸ್ಥಳವಾದ ಗುಡಿ, ದೇವಾಲಯಗಳು, ಬಸದಿಗಳು, ಅವುಗಳ ನಿರ್ಮಾಣ, ಅವುಗಳ ಜೀರ್ಣೋದ್ಧಾರ ಮತ್ತು ದೇವರ ಅಂಗಭೋಗಕ್ಕೆ, ಲಿಂಗಭೋಗಕ್ಕೆ, ರಂಗಭೋಗಕ್ಕೆ "ಇಂದು ನೂರು ಕಮ್ಮವನ್ನು ಶಿವನ ನೈವೇದ್ಯಕ್ಕೆ ಸರಿಯಾದ ರೀತಿಯಲ್ಲಿ ಪರಿಣಾಮಕಾರಿಯಾಗಿ ಉಪಯೋಗಿಸಲ್ಪಡಬೇಕು ಎಂದು ದತ್ತಿಗಳನ್ನು ಬಿಡುವದೊಂದು ಪರಿಸಂಪ್ರದಾಯ. ಅದನ್ನು ನಡೆಸಿಕೊಂಡು ಹೋಗುವುದು ಅಲ್ಲಿಯ ಜನರ ಕರ್ತವ್ಯ. ಹಾಗೂ ಅಲ್ಲಿಯ ದತ್ತಿಯನ್ನು ದುರುಪಯೋಗಪಡಿಸಿದರೆ ಗಂಗಾ, ಗಮಾ, ವಾರಣಾಸಿ ಕುರುಕ್ಷೇತ್ರದಂತಹ ಹಿಂದೂ ಪವಿತ್ರ ಸ್ಥಳಗಳಲ್ಲಿ ಪಾಪಕಾರ್ಯ ಮಾಡಿದಷ್ಟು ಅಪರಾಧವೆಂಬ ಭಾವನೆ ಜನಮನದಲ್ಲಿತ್ತು. 'ಮಹಾಶ್ರೀಯು ಮಕ್ಕುವಿದಂ ಕಾಮದ ಪಾತಕರಿಗೆ ಪಿರಿದುಂ ಗಂಗಾಗಮಾ ವಾರಣಾಸಿ ಕುರುಕ್ಷೇತ್ರದ ಪೂತ್ರಗೋಧ್ವಜಮುನಿಭ್ರಾತ್ರಂಗಳಲ್ಲಿ ಕೊನ್ದ ಪಾಪಮಕ್ಕುಂ ಬೆಪದಿಕ್ಕು ಮಾಪರು' ಎಂದು ಶಾಸನದಿಂದ ಗೊತ್ತಾಗುತ್ತದೆ.[೩೩]

ಕರ್ನಾಟಕದ ಹಿಂದಿನ ಹಲವಾರು ರಾಜ ಮನೆತನಗಳಂತೆ ರಟ್ಟರಸರು ಸನಾತನ ಧರ್ಮದ ಉದ್ಧಾರವು ತಮ್ಮ ಮುಖ್ಯ ಧ್ಯೇಯವೆಂದು ಭಾವಿಸಿದ್ದರು. ಈ ರಾಜ್ಯದ ಅರಸರು ಧರ್ಮಗುರುಗಳ ಮಾರ್ಗದರ್ಶನವನ್ನು ಪಡೆಯುತ್ತಿದ್ದರು. ರಟ್ಟರ ೨ನೇ ಲಕ್ಷ್ಮೀದೇವನ ಗುರು ಮುನಿಚಂದ್ರನು ರಾಜಗುರುವಾಗಿ ಶಸ್ತ್ರ ಶಾಸ್ತ್ರ ವಿದ್ಯಾಗುರುವಾಗಿದ್ದರು.

ಕರ್ನಾಟಕದ ವೈಶಿಷ್ಟವಾದ ಪರಮತ ಸಹಿಷ್ಣುತೆಯು ರಟ್ಟರ ರಾಜ್ಯದಲ್ಲಿಯೇ ಇತ್ತು. 'ಭೂವಮತ ಚತುಸ್ತೇಮೆಯು ಎಂದು ತೇರದಾಳ ಶಾಸನದಲ್ಲಿ ಹೇಳಿರುವ ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಈ ನಾಲ್ಕು ಮತದ ದೇವಾಲಯಗಳು ರಟ್ಟರ ರಾಜ್ಯದಲ್ಲಿದ್ದವು ಎಂದು ತಿಳಿದು ಬರುತ್ತದೆ.

ಶಿಲಾಹಾರ ಗೊಂಕರಸನು ಜೈನಧರ್ಮಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿ ಗೊಂಕ ಜಿನಾಲಯವು ಕಟ್ಟಿಸಿದನೆಂದು ಅದೇ ಶಾಸನದಿಂದ ತಿಳಿಯುತ್ತದೆ. ರಟ್ಟರ ೪ನೇ ಕಾರ್ತವೀರ್ಯನ ರಾಣಿ ಏಚಲಾದೇವಿ ಜೈನಳಾಗಿದ್ದರೂ ಸಹ ಶಿವಭಕ್ತೆಯಾಗಿದ್ದಳು. "ಶ್ರೀ ಮನ್ಮಥಾ

ಸಾಮಸ್ತನಂಕರನ ಮಾಡಿಸಿದಂಕೇಶ್ವರೇ ವರ್ಗ ಬಿಟ್ಟು ವೃತ್ತಿ" ಎಂದು ಶಾಸನದಿಂದ ಪರಧರ್ಮದ ಬಗ್ಗೆ ಎಷ್ಟು ಸಹಿಷ್ಣುತೆಯುಳ್ಳರಾಗಿದ್ದರೆಂದು ತಿಳಿದುಬರುತ್ತದೆ. ರಟ್ಟರಾಜರು ಪ್ರಜಾಮತರಾಗಿಗಳಾಗಲು ಇದೂ ಒಂದು ಕಾರಣವು. ೨ನೇ ಕಾರ್ತವೀರ್ಯನ ರಾಣಿ ಪದ್ಮಲಾದೇವಿಯು ಜೈನಧರ್ಮದ ವಿಷಯದಲ್ಲಿ ಆಕೆಯೂ ಶ್ರದ್ಧೆಯನ್ನು ಹೊಂದಿದ್ದಳೆಂದೂ ಶ್ರವಣಧರ್ಮ ತತ್ವಗಳನ್ನು ಪ್ರೋತ್ಸಾಹಿಸುವಲ್ಲಿ ಆಕೆಯು ಎರಡನೇ ಪದ್ಮಾವತಿಯಾಗಿದ್ದಳೆಂದು ಶಾಸನದಿಂದ ತಿಳಿದುಬರುತ್ತದೆ.

ರಟ್ಟರ ಕಾಲದ ಗುಡಿಗಳನ್ನು ಶಾಸನಗಳಲ್ಲಿ ನೋಡಬಹುದು. ಪ್ರಮುಖವಾಗಿ ಕಂಡು ಬರುವ ಧರ್ಮಗಳೆಂದರೆ ವೈಷ್ಣವ, ಬ್ರಾಹ್ಮಣ, ಶೈವ, ಜೈನ ಇದ್ದೀತೆಂದೂ ತಿಳಿದುಬರುತ್ತದೆ.

### ೩.೧ ವೈಷ್ಣವರು

ವೈಷ್ಣವ ಪಂಥದವರು ವಿಷ್ಣುವನ್ನೇ ಆರಾಧ್ಯದೈವವೆಂದು ಪೂಜಿಸುತ್ತಾರೆ. ಬೌದ್ಧಿಕವಾಗಿ ಜ್ಞಾನಕ್ಕಿಂತ ಭಾವರೂಪವಾದ ಭಕ್ತಿಯೇ ಶ್ರೇಷ್ಠವೆಂದು ವೈಷ್ಣವ ಧರ್ಮವು ಒತ್ತಿ ಹೇಳುತ್ತದೆ.[೩೪] ಬ್ರಾಹ್ಮಣರಿಗೆ ರಟ್ಟರ ಕಾಲದಲ್ಲಿ ಉನ್ನತವಾದ ಸ್ಥಾನವಿತ್ತೆಂದು ತಿಳಿಯುತ್ತದೆ. ಚತುರ್ವರ್ಣಗಳಲ್ಲಿ ಬ್ರಾಹ್ಮಣನೇ ಶ್ರೇಷ್ಠನೆಂದೂ ಅವನು ಬಹುವಿದ್ವತ್‌ವುಳ್ಳವನೂ, ಸಮಾಜದಲ್ಲಿ ಗೌರವಸ್ಥನೂ ಎಂದೆಲ್ಲಾ ರಟ್ಟರ ಕಾಲದಲ್ಲೂ ತಿಳುವಳಿಕೆಯಿತ್ತು. ಬ್ರಾಹ್ಮಣರೆಂದರೆ ಭೂಮಿಯ ಮೇಲಿನ ಪೂಜನೀಯರು ಎಂದು ರಟ್ಟರು ಸಮಕಾಲೀನ ಒಂದು ಶಾಸನದಿಂದ ತಿಳಿದುಬರುತ್ತದೆ. ಶಾಸನ ನಾಶ ಮಾಡಿದವರಿಗೆ ಸಾವಿರ ಬ್ರಾಹ್ಮಣರನ್ನು ಕೊಂದ ಪಾಪ ಬರುವುದು ಮತ್ತು ಅನ್ನಛತ್ರದಲ್ಲಿ, ಧರ್ಮಪ್ರತಿಷ್ಠಾನದಲ್ಲಿ ಬ್ರಾಹ್ಮಣರ ಹೆಣ್ಣುಮಗಳು ಅಡಿಗೆಯನ್ನು ಮಾಡುವಂತಾಗಲಿ, ಅವಳಿಗೆ ಸುಖ ಹಾಗೂ ಭಾಗ್ಯ ದೊರೆಯುವುದು ಎಂದು ಅವರಲ್ಲಿರುವ ಗೌರವಾದರ ಅಂದಿನ ಕಾಲದ ಜನರಲ್ಲಿದ್ದುದು ತಿಳಿದುಬರುತ್ತದೆ.

### ೩.೨ ಶೈವರು

ಭರತಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು ಶೈವಧರ್ಮಕ್ಕೆ[೩೫] ಆಧಾರ ಗ್ರಂಥಗಳಾದ ಶೈವಾಗಮಗಳು ಇಪ್ಪತ್ತೆಂಟು. ಇವು ಮುಖ್ಯವಾದವುಗಳು. ಇವಲ್ಲದೆ, ಇವುಗಳಲ್ಲಿ ಒಂದೊಂದಕ್ಕೂ ಹೊಂದಿಕೊಂಡಂತೆ ಉಪಾಗಮಗಳಿವೆ. ಉದಾಹರಣೆಗೆ ಯೋಗಜ್ಞಾನಕ್ಕೆ ಐದು ಉಪಾಗಮಗಳಿವೆ. ವಿನಾಶಿರೋತ್ತರ, ತಾರಕ, ಸಾಂಖ್ಯ, ಶಾಂತಿ ಮತ್ತು ಆತ್ಮಯೋಗ.[೩೬]

### ೩.೩ ಪಾಶುಪತ

ಮಹಾಭಾರತದಲ್ಲಿ ಹೇಳಿರುವ ಐದು ಸಿದ್ಧಾಂತಗಳಲ್ಲಿ ಪಾಶುಪತವೂ ಒಂದು. ಅರ್ಜುನನು ಶಿವನ ಆಶೀರ್ವಾದದಿಂದ ಪಾಶುಪತಾಸ್ತ್ರವನ್ನು ಪಡೆದ ವಿಷಯ ಪ್ರಸಿದ್ಧವೇ. ಹೀಗೆ ಶೈವಧರ್ಮವು ಅತ್ಯಂತ ಪುರಾತನ ಧರ್ಮವಾಗಿದೆ. ಅದರ ಒಟ್ಟು ತಿರುಳು ಇದು. ಒಬ್ಬೊಬ್ಬ ಜೀವಿಯೂ ಪಶು ಅವನನ್ನು ಕಟ್ಟಿ ಹಾಕಿರುವುದು ಪಾಶ; ಜೀವಿಗಳ ಒಡೆಯ, ಪಶುಪತಿ. ಪಾಶವನ್ನು ಕತ್ತರಿಸಲು ಪಶುಪತಿ ಅಥವಾ ಮಹಾದೇವ. ಹೀಗೆ ಪಾಶುಪತ ಧರ್ಮವು ಶೈವಧರ್ಮಕ್ಕೆ ಮತ್ತೊಂದು ಹೆಸರಾಯಿತು.[೩೭]

### ೩.೪ ಲಕುಲೀಶ

ಶೈವಧರ್ಮಕ್ಕೆ ಲಾಕುಲ ಸಮಯ ಎಂಬ ಮತ್ತೊಂದು ಹೆಸರು ಇದೆ. ಈ ಹೆಸರೇ ಬಹುಶಃ ಪ್ರಾಚೀನವಾದದ್ದು. ಇದು ಲಕುಲೀಶ ಎಂಬ ವ್ಯಕ್ತಿಯನ್ನು ಸೂಚಿಸುವುದರಿಂದ ಇದರ ಸ್ಥಾನದಲ್ಲಿ ಪಶುಪತಿ ಎಂಬ ಹೆಸರನ್ನಿಟ್ಟು ಪಾಶುಪತ ಸಮಯ ಎಂದು ಮುಂದಿನವರು ಮಾಡಿಕೊಂಡಿರಬೇಕೆಂದೂ ಹೇಳುತ್ತಾರೆ ಡಾ॥ ಭಂಡಾರ್ಕರ್‌ವರು.

ಲಕುಲೀಶನ ವಿಗ್ರಹಗಳು ಸಾಮಾನ್ಯವಾಗಿ ಬಲಗೈಯಲ್ಲಿ ಮಾದಲದ ಹಣ್ಣನ್ನೂ, ಎಡಗೈಯಲ್ಲಿ ದಂಡವನ್ನು ಹಿಡಿದಿರುತ್ತವೆ. ಈ ವಿಗ್ರಹಗಳಿಗೆ ಎರಡು ಕೈಗಳಿರುವುದು. ಅವನು ಬುದ್ಧ, ಮಹಾವೀರರಂತೆ ಮನುಷ್ಯನಾಗಿ ಅವತರಿಸಿದುದನ್ನು ಸೂಚಿಸುತ್ತದೆ.[೩೮]

### ೩.೫ ಕಾಳಾಮುಖ

ಲಾಕುಳ ಅಥವಾ ಪಾಶುಪತರಿಗೆ ಕಾಳಾಮುಖರೆಂದು ಹೆಸರೂ ಇದೆ. ಮುಖದ ಮೇಲೆ ಕರಿಯ ಗೆರೆಗಳ್ನು ಹಚ್ಚಿಕೊಳ್ಳುತ್ತಿದ್ದುದರಿಂದ ಇವನ್ನು ಕರೆಯುತ್ತಿದ್ದಿರಬೇಕು ಎನ್ನುತ್ತಾರೆ ಗೋಪಿನಾಥರಾಯರು.

ಇಂತಹ ಪಾಶುಪತ ಮತ್ತು ಕಾಳಾಮುಖ ಧರ್ಮವು ರಟ್ಟರ ಆಡಳಿತದ ವಿಭಾಗದಲ್ಲಿತ್ತೆಂಬುದು 'ನೇಸರಿಗೆ'ಯ ಶಾಸನದಿಂದ ತಿಳಿದುಬರುತ್ತದೆ. ಕಾಳಾಮುಖ ಮತ್ತು ಪಾಶುಪತರನ್ನು ಶ್ರೀ ಚನ್ನಬಸವಣ್ಣನವರು ಪ್ರತ್ಯೇಕವಾಗಿ ಹೇಳುತ್ತಾರೆ. ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಕಾಳಾಮುಖ-ಪಶುಪತಿ ಇವರು ಷಡ್ದರ್ಶನ ಶೈವ ಕವಿಗಳು ಎಂದಿದ್ದಾರೆ. ( ಚನ್ನಬಸವಣ್ಣನವರ ವಚನಗಳು, ಪು.ಸಂ. ೧೯, ೧೯೩೭)

ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆಯಲ್ಲಿ ಕಾಳಾಮುಖ, ಕಾಪಾಲ, ಪಾಶುಪತ, ಲಕುಲೇಶ, ಮತ್ತು ಶೈವರನ್ನು ಹೆಸರಿಸುತ್ತಾನೆ. ಇವನು ರಟ್ಟರ ಸಮಕಾಲೀನ ಕವಿ ಇರುವುದರಿಂದ ಈ ಪಂಗಡಗಳು ಪ್ರಚಲಿತವಾಗಿದ್ದವು ಎಂದು ಹೇಳಬಹುದು.[೩೯]

ರಟ್ಟರು ಶೈವಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದ್ದರು. ಅವರ ಕಾಲದಲ್ಲಿ ನಿರ್ಮಾಣಗೊಂಡ ಶೈವ ದೇವಾಲಯಗಳನ್ನು ನೋಡಬಹುದು.

- ಸೊಗಲದಲ್ಲಿ ಕ್ರಿ.ಶ. ೯೮೦ ರಲ್ಲಿ ರಟ್ಟರ ಒಂದನೇಯ ಕಾರ್ತವೀರ್ಯ ಕಾಲಕ್ಕೆ ದತ್ತಿ ಬಿಡಲಾಗಿದೆ.

- ಗೋಕಾಕ ಜಲಪಾತದ ಪಕ್ಕದಲ್ಲಿರುವ ಮಹಾಲಿಂಗೇಶ್ವರ ದೇವಾಲಯಕ್ಕೆ ಮೂರನೇಯ ಕಾರ್ತವೀರ್ಯನ ಕಾಲಕ್ಕೆ ಆ ದೇವರಿಗೆ ದತ್ತಿ ಬಿಡಲಾಗಿದೆ.

- ಹಣ್ಣಿಕೇರಿ ಶಿವಾಲಯ ನಿರ್ಮಾಣಗೊಂಡು ಅದರ ಅಂಗಭೋಗ ರಂಗಭೋಗಕ್ಕೆ ದತ್ತಿ ಬಿಟ್ಟಿದ್ದು ಮೊದಲನೆಯ ಕಾರ್ತವೀರ್ಯನ ಕಾಲದಲ್ಲಿ.

- ಸವದತ್ತಿಯಲ್ಲಿ ಅಂಕೇಶ್ವರ ದೇವರಿಗೆ ದತ್ತಿಬಿಟ್ಟಿದ್ದು ರಟ್ಟರ ಕಾಲದಲ್ಲಿಯೇ.

- ಇದಕ್ಕಿಂತಲೂ ಮಹತ್ವವೆಂದರೆ ಶ್ರೀಶೈಲ ಮಲ್ಲಿಕಾರ್ಜುನ ದೇವರಿಗೆ ಮೂರು ಸಲ ಹೋಗಿ ಅಲ್ಲಿಯ ಗಿರಿಯಿಂದ ಪವಿತ್ರ ಲಿಂಗವನ್ನು ತಂದು ಸವದತ್ತಿಯ ಹೊರವಲಯದಲ್ಲಿ ನಾಗರಕೆರೆಯ ಬಳಿ ಸ್ಥಾಪಿಸಿರುವುದು ರಟ್ಟರ ಕಾಲದಲ್ಲಿಯೇ. ಇದರಿಂದ ರಟ್ಟರಲ್ಲಿ ಶೈವಧರ್ಮಕ್ಕೆ ಎಷ್ಟೊಂದು ಪ್ರೋತ್ಸಾಹ ಕೊಟ್ಟಿರುವರೆಂದು ತಿಳಿದುಬರುತ್ತದೆ.

**೩.೬ ಜೈನರು**

ಕನ್ನಡ ನಾಡಿನಲ್ಲಿ ಪ್ರತಿಯೊಂದು ಧರ್ಮವೂ ತನ್ನ ಧಾರ್ಮಿಕ ನೀತಿ ಸಂಹಿತೆಯ ಸೂತ್ರಗಳಿಂದ ನಿಯಂತ್ರಿಸಲ್ಪಟ್ಟು ಪ್ರಾದೇಶಿಕವಾಗಿ ಕೆಲವು ಅಸ್ಮಿತೆಗಳನ್ನು ಕಟ್ಟಿಕೊಳ್ಳುತ್ತ ಬಂದಿರುವುದು ಒಂದು ಕುತೂಹಲಕಾರಿ ಅಧ್ಯಯನದ ವಸ್ತುವಾಗಿದೆ. ಈ ನಾಡಿನ ಪ್ರಮುಖ ಹಾಗೂ ಪ್ರಾಚೀನ ಧರ್ಮಗಳಲ್ಲಿ ಒಂದೆನಿಸಿರುವ ಜೈನ ಧರ್ಮವು ಜಿನನಿಂದ ಭೋಧಿಸಲಾದ ಧರ್ಮವೇ ಜೈನಧರ್ಮ. ಜಿನನು ಅವತಾರಿಯಲ್ಲ. ತನ್ನ ಸ್ವಂತ ಬಲದಿಂದ ಕಾಮ, ಕ್ರೋಧ, ವಿಕಾರಗಳನ್ನು ಜಯಿಸಿ ಜಿನನಾದನು.

ಇಂಥ ಜೈನಧರ್ಮವು ಪ್ರಾಚೀನ ಕರ್ನಾಟಕದಲ್ಲಿ ಒಂದು ಪ್ರಬಲವಾದ ಧರ್ಮವಾಗಿತ್ತು. "ಜಿನಧರ್ಮದಾನ ಮಾದತ್ತಮಳ" [೪೦] ಎಂದು ಶಾಸನವು ಕರ್ನಾಟಕದಲ್ಲಿ ಜೈನಧರ್ಮದ ಅಸ್ತಿತ್ವವನ್ನು ಹೇಳುತ್ತದೆ.

ಗಂಗ ಮನೆತನದ ಸ್ಥಾಪನೆಯು ಕ್ರಿ.ಶ. ೨ನೇ ಶತಮಾನದಲ್ಲಿ ಜೈನಾಚಾರ್ಯರಾದ ಸೆಂಚನಂದಿಗಳಿಂದ ಮಾಡಲ್ಪಟ್ಟಿತ್ತು. ಈ ವಂಶದ ಮೊದಲನೇ ಅರಸನು ಮಾಧವ. ಹೊಯ್ಸಳ ವಂಶದ ಏಳಿಗೆಯು ಒಬ್ಬ ಜೈನ ಮುನಿಯಿಂದಾಯ್ತು. ಈ ವಂಶದ ಮೊದಲನೇಯ ದೊರೆ ಸಳನು. ರಾಷ್ಟ್ರಕೂಟರ ಆಶ್ರಯದಿಂದ ಜೈನಧರ್ಮವು ಅಭ್ಯುದಯವನ್ನು ಹೊಂದಿತ್ತು. ಸುಮಾರು ಹತ್ತನೇ ಶತಮಾನದಲ್ಲಿ ರಾಷ್ಟ್ರಕೂಟರ ಸಾಮ್ರಾಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಅದೇ ಅವಧಿಯಲ್ಲಿ ಸವದತ್ತಿಯ ರಟ್ಟರಸರು ಆಳ್ವಿಕೆಯನ್ನು ಪ್ರಾರಂಭಿಸಿದ್ದರು. ರಾಷ್ಟ್ರಕೂಟರು ಜೈನಧರ್ಮದ ಕಡೆಗೆ ಅವರ ಒಲವು ವಿಶೇಷವಾಗಿದ್ದಿತ್ತು. ಕ್ರಿ.ಶ. ೯೮೦ರ ಸವದತ್ತಿಯ ಶಾಸನದಲ್ಲಿ ಬಸದಿಯೊಂದನ್ನು "ರಟ್ಟರ ಪಟ್ಟಜಿನಾಲಯ"ವೆಂದು ಕರೆದಿದ್ದು, ರಾಷ್ಟ್ರಕೂಟರಿಂದ ಜೈನಧರ್ಮಕ್ಕೆ ಸಿಕ್ಕ ಪ್ರೋತ್ಸಾಹವೆನ್ನಬಹುದು. ಜೈನಧರ್ಮದಲ್ಲಿ ಯಾಪನೀಯವೆಂಬ ಮೂರನೇಯದೊಂದು ಪಂಥವಿತ್ತು. ಈ ಯಾಪನೀಯ ಸಂಘವು ಜೈನಧರ್ಮದಲ್ಲಿ ಸುಧಾರಣೆಗಳನ್ನು ತರಲು ಪ್ರಯತ್ನಿಸಿತ್ತು. ಈ ಸಂಘವು ರಟ್ಟರ ಆಳ್ವಿಕೆಯಲ್ಲಿದ್ದಿತೆಂದು ತಿಳಿಯಲು ಸಾಕಷ್ಟು ಶಾಸನಗಳ ಆಧಾರಗಳಿರುತ್ತವೆ.

ರಟ್ಟರಸರು ಪರಧರ್ಮದಲ್ಲಿ ಸಹಿಷ್ಣುತೆಯನ್ನು ತಾಳಿ ಜೈನಧರ್ಮದಲ್ಲಿ ನಿಷ್ಠೆಯುಳ್ಳವರಾಗಿದ್ದರು. ಇವರ ಶಾಸನಗಳಲ್ಲಿ 'ಜಿನನನು ಸ್ಮರಿಸೆ' ಶಾಸನವನ್ನು ಹೊರಡಿಸಿರುವರು. ಅವರು ಪರಧರ್ಮಕ್ಕೆ ಪ್ರೋತ್ಸಾಹ ನಿಡುತ್ತ ತಮ್ಮ ಧರ್ಮದ ಕಡೆಗೆ ಅನೇಕ ಹೊಸ ಬಸದಿಗಳನ್ನು ಕಟ್ಟಿ ತಮ್ಮ ಹಿರಿಮೆಯನ್ನು ಮೆರೆದು ಸ್ವಧರ್ಮದ ನಿಷ್ಠೆಯ ಧ್ಯೋತಕವಾಗಿ ಶಾಸನಗಳ ಆಧಾರಗಳ ಮೇಲಿಂದ ತಿಳಿದಬರುವ ರಟ್ಟರ ಕಾಲದಲ್ಲಿ ನಿರ್ಮಿಸಿದ ಬಸದಿಗಳೆಂದರೆ :

೧. ಸವದತ್ತಿಯ ರಟ್ಟರ ಪಟ್ಟ ಜಿನಾಲಯ

೨. ತೇರದಾಳದ ಗೊಂಕ ಜಿನಾಲಯ

೩. ಕಲ್ಲೊಳ್ಳಿಯ ತ್ರೀಕೂಟ ಬಸದಿ

೪. ಬೆಳಗಾವಿ ಕಮಲ ಬಸದಿ

೫. ಎಕ್ಸಂಬಾದ ಜಿನಬಸದಿ

೬. ರಾಯಬಾಗದ ಜಿನಬಸದಿ

೭. ಕೊಣ್ಣೂರಿನ ಪಾರ್ಶ್ವನಾಥ ಜಿನಬಸದಿ

೮. ಸಂಕೇಶ್ವರ ಜಿನಬಸದಿ

ಮುಂತಾದವುಗಳನ್ನು ನಿರ್ಮಿಸಿ ಅವುಗಳ ಅಂಗಭೋಗ, ರಂಗಭೋಗ ನೈವೇದ್ಯಕ್ಕೆ ದಾನದತ್ತಿಗಳನ್ನು ಬಿಟ್ಟಿದ್ದಾರೆ. ಜೈನಧರ್ಮದ ಏಳ್ಗೆಗಾಗಿ ವಿಶೇಷವಾದ ಪರಿಶ್ರಮ ವಹಿಸಿ ಜೈನಧರ್ಮದ ಇತಿಹಾಸದಲ್ಲಿ ಸ್ಥಿರಸ್ಥಾಯಿಯಾಗಿ ನಿಂತಿದ್ದಾರೆ.

**ಅಡಿಟಿಪ್ಪಣಿಗಳು**

೧. ಕೆ.ಆರ್.ಐ. ನಂ. ೨೪ ಕ್ರಿ.ಶ. ೯೬೦

೨. ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅದ್ಯಯನ** – ೨೦೧೪, ಪು.ಸಂ. ೧೬೩ ಸಪ್ನ ಬುಕ್ ಹೌಸ್ ಬೆಂಗಳೂರು

೩. ಅದೇ, ಪು.ಸಂ. ೧೩೮ ೧೩೯

೪. ಅದೇ, ಪು.ಸಂ. ೧೩೯ ೧೪೦ ೧೪೧

೫. ಅದೇ, ಪು.ಸಂ. ೧೪೦

೬. ಅದೇ, ಪು.ಸಂ. ೧೪೧

೭. ಅದೇ, ಪು.ಸಂ. ೧೪೨ ೧೪೩

೮. ಶಾಸನ ಪದ್ಯ ಮಂಜರಿ, ಪು.ಸಂ. ೨೫೦

## ಅಧ್ಯಾಯ–೪ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ

## ಅಧ್ಯಾಯ –೪

# ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ

ಪ್ರಾಚೀನ ಕರ್ನಾಟಕದಲ್ಲಿ ಆಳ್ವಿಕೆವೆತ್ತರು ಬೆಳಗಾವಿಯು ಗಂಡುಮೆಟ್ಟಿನ ಜಿಲ್ಲೆ. ಸವದತ್ತಿಯ ರಟ್ಟ ಮನೆತನದವರು. ಹೆಣ್ಣುಮಕ್ಕಳಿಗೆ ಮಾನ್ಯತೆ ಕೊಡುವುದರ ಮೂಲಕ ಸಾಮಾಜಿಕ, ಧಾರ್ಮಿಕ ಕಾರ್ಯಗಳಂತಹ ಮಹತ್ವದ ಕಾರ್ಯ ಕೈಕೊಳ್ಳಲು ಅನುವು ಮಾಡಿಕೊಟ್ಟಿರುವರು. ರಟ್ಟರ ಆಡಳಿತದ ವ್ಯಾಪ್ತಿಗೊಳಪಟ್ಟ ಜನಜೀವನವು ಸುಖಮಯವಾಗಿತ್ತೆಂದು ತಿಳಿದುಬರುತ್ತದೆ. ಆದ್ದರಿಂದ ಜನರು ಉಲ್ಲಾಸದಿಂದಲೂ ಜೀವನ ನಡೆಸುತ್ತಿದ್ದರು. ನೇಮಿಚಂದ್ರ ಕವಿಯ "ಲೀಲಾವತಿ ಪ್ರಬಂಧ"ದಲ್ಲಿ ಹಿಂದಿನ ಕವಿಗಳಿಗೆ ಶುದ್ರಜಿನದ ಭಯವಿಲ್ಲ. ಮುಂದಿನ ಕವಿಗಳಿಗೆ ಮತೀಯ ಗಲಭೆಯ ಅಜ್ಞಾನತೆಯು ಸುಳಿವಿಲ್ಲ. ಶೃಂಗಾರ ರಸಭರಿತವಾದ ಕಾವ್ಯ ಬರೆಯಬೇಕಾದರೆ ಕವಿ ಎಷ್ಟೊಂದು ನೆಮ್ಮದಿಯನ್ನು ಕಂಡುಕೊಂಡಿರಬೇಕು.[೪೧] ಸಾಹಿತ್ಯವು ಸಮಾಜದ ಕನ್ನಡಿ.

ರಟ್ಟರ ಮೂರುನೂರು ವರ್ಷಗಳ ಆಳ್ವಿಕೆಯ ಕಾಲವನ್ನು ಅವಲೋಕಿಸಿದಾಗ ಜನಮತಿ ಎಲ್ಲೆಲ್ಲೂ ಒಂದೇ ಸುಖಜೀವನದ ಗತಿ. ಒಂದೇ ಆನಂದದ ಸ್ಮೃತಿ. ಜೀವನದ ಗುರಿಯೂ ಒಂದೇ. ಅದನ್ನು ಸಾಧಿಸಬೇಕೆಂಬ ಸಂಕಲ್ಪವೂ ಒಂದೇ ಎಂಬುದು ಶಾಸನಗಳಿಂದ ಗೊತ್ತಾಗುತ್ತದೆ.

ಅರಸನಾದವರು ತನ್ನ ರಾಜ್ಯದ ಪ್ರಜೆಗಳನ್ನು ತನ್ನ ಮಕ್ಕಳಂತೆ ಭಾವಿಸುತ್ತಿದ್ದರು. ಕೆರೆ, ಬಾವಿ ನಿರ್ಮಾಣ, ಅನ್ನಛತ್ರ, ಹೂದೋಟ, ವಸ್ತ್ರದಾನ, ದೇವಾಲಯ ನಿರ್ಮಾಣ, ಅವುಗಳ ಜೀರ್ಣೋದ್ಧಾರ ಮುಂತಾದ ಸಾಮಾಜಿಕ ಕಾರ್ಯಗಳನ್ನು ಕೈಗೊಂಡಿದ್ದರು, ಸಮಾಜದ ಏಳಿಗೆಗಾಗಿ ಶ್ರಮಿಸಿದ್ದಾರೆ. ಹಾಗಾಗಿ ಜನವಸತಿ ಇರುವ ಸ್ಥಳದಲ್ಲಿ ಅನ್ನ ಸಮಸ್ಯೆ, ವಿದ್ಯಾಭ್ಯಾಸದ ಕೊರತೆ ಇದ್ದಲ್ಲಿ ಇವುಗಳ ಕಾರ್ಯ ಮಾಡಿದರು. ಈ ಎಲ್ಲ ಅನುಕೂಲತೆಗಳನ್ನು ರಟ್ಟರಸರು ಪ್ರಜೆಗಳಿಗೆ ಒದಗಿಸಿ ಕೊಡುತ್ತಿದ್ದರು.

## ೪.೧ ಸಾಮಾಜಿಕ ವ್ಯವಸ್ಥೆ

ಸಮಾಜ ನಿರ್ಮಾಣದಲ್ಲಿ ಹೆಣ್ಣು ತನ್ನ ವಿಭಿನ್ನ ಪಾತ್ರಗಳು ವೈವಿಧ್ಯತೆಗಳಿಂದ ಕರ್ನಾಟಕ ಇತಿಹಾಸುದ್ದಕ್ಕೂ ವ್ಯಾಪಿಸಿ ನಿಂತಿದ್ದಾಳೆ. ತಾಯಿಯಾಗಿ, ಮಡದಿಯಾಗಿ, ಸ್ನೇಹಿತೆಯಾಗಿ, ತಂಗಿಯಾಗಿ, ಪುರುಷನ ಜೀವನ ರಂಗವನ್ನು ಬೆಳಗಿದ ಮಹಿಳಾ ಯಶೋಭೂಮಿಗೆ ಇವರದು. ರಟ್ಟರ ಕಾಲದಲಿ

ಕೂಡಿ ಬಾಳುವ ಅವಿಭಕ್ತ ಕುಟುಂಬಗಳೇ ಹೆಚ್ಚು. ಹಾಗಾಗಿ ತಂದೆ–ತಾಯಿಗಳಿಗೆ ವಿಧೇಯರಾಗಿ ಕೂಡಿ ಬಾಳುತ್ತಿದ್ದರು.

ಕುಟುಂಬದ ಯಜಮಾನನಿಗೆ ವಾರಸುದಾರರಿಲ್ಲದ ಪಕ್ಷದಲ್ಲಿ ತನ್ನ ಎಲ್ಲಾ ಆಸ್ತಿಯನ್ನು ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಕ್ಕೆ ಉಪಯೋಗಕ್ಕಾಗಿ ದಾನ ಮಾಡುವ ಸಂಪ್ರದಾಯವು ರಟ್ಟರ ಕಾಲದಲ್ಲಿದಿತ್ತೆಂದು ಸಂಕೇಶ್ವರ (೧೨ನೇ ಶತಮಾನ) ಶಾಸನಗಳಿಂದ ಗೊತ್ತಾಗುತ್ತದೆ.

ರಟ್ಟರ ಕಾಲದಲ್ಲಿಯೂ ಬಹುಪತ್ನಿತ್ವವಿತ್ತು. ಇದಕ್ಕೆ ಸಮಾಜದಲ್ಲಿ ಮನ್ನಣೆ ಇತ್ತು. ಜನಸಾಮಾನ್ಯರಲ್ಲಿ ವಿರಳವಾಗಿತ್ತು. ರಾಜನ ಪತ್ನಿಯರಲ್ಲಿ ಹಿರಿಯವಳೇ "ಅಗ್ರಮಹಿಷಿ" ಅಥವಾ "ಪಿರಿಯರಸಿ" ಎಂದು ಕರೆಯಲಾಗಿದೆ.[೪೨] ಆದರೆ ತನ್ನ ಪತ್ನಿಯರನ್ನು ಹೊರತುಪಡಿಸಿ ಉಳಿದ ಹೆಣ್ಣುಮಕ್ಕಳನ್ನು ಸಹೋದರಿ ಭಾವನೆಯಿಂದ ನಡೆದುಕೊಳ್ಳುತ್ತಿದ್ದರು. ನೇಸರಗಿ ಶಾಸನ (ಕ್ರಿ.ಶ. ೧೧೪೧) ದಲ್ಲಿ ರಾಜನೇ ನೀತಿವಂತನಾದ ಬಳಿಕ ಪ್ರಜೆಗಳಿಗೆ ಅನೀತಿಯಿಂದ ನಡೆಯಲು ಸಾಧ್ಯವಿಲ್ಲವೆಂದು ಹೇಳಲಾಗಿದೆ.

ಶಾಸನದಲ್ಲಿ ಪತಿನಿಷ್ಠೆಯುಳ್ಳ "ಪತಿವ್ರತೆ" ಪುರುಷವ್ರತ ಎಂದೂ ಗುರುತಿಸುತ್ತೇವೆ. ಅದು ಮಹಿಳೆ 'ಘಟಸರ್ಪ ಪವಾಡ'ದಂತಹ ಪರೀಕ್ಷೆಗೆ ಉತ್ಸಾಹದಿಂದ ಒಳಗಾಗುತ್ತಿದ್ದರು. ಅದಕ್ಕೆ ಅಂದು ವರ್ಗ ವರ್ಗಗಳ ಕಟ್ಟು ನಿಬಂಧನೆ ಇರಲಿಲ್ಲ. ರಟ್ಟರಾಜನ ಮಗಳು ಲಕ್ಷ್ಮೀದೇವನ ಮಡದಿಯೂ ಆದ ಚಂದ್ರಿಕಾದೇವಿಯನ್ನು ವರ್ಣಿಸುವ ಕಲ್ಹೋಳ ಶಾಸನ 'ಘಟೋದರ' ಸುಸ್ಥಿತಸರ್ಪದರ್ಪಭಂಜನೆ ಎಂದೂ, ರಾಯಬಾಗ ಶಾಸನ 'ಘಟಸರ್ಪ ವಿಜಯ ಜನಿಕಾನಿಕರವಜನಿತ ಜನಮನೋಮುದ್ರೆ' ಎಂದೂ ಚಂದ್ರಿಕಾದೇವಿಯನ್ನು ಮನಮುಟ್ಟಿ ವರ್ಣಿಸಿವೆ.

ಪತಿಯ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಸಹ ಭಾಗಿನಿ. ಪತಿಯ ಸುಖವೇ ತನ್ನ ಸುಖ ಪತಿಯ ದುಃಖವೇ ತನ್ನ ದುಃಖವೆಂದರಿತು ತನ್ನ ಪತಿಯನ್ನು ತನ್ನ ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುವಳು ಎಂದು ಕವಿ ನೇಮಿಚಂದ್ರನು "ಲೀಲಾವತಿ"ಯಲ್ಲಿ ಉಲ್ಲೇಖಿಸಿದ್ದಾನೆ. ಇಲ್ಲಿ ಕವಿಯು ರಾಜನನ್ನು ಆದರ್ಶವನ್ನಾಗಿ ಸಮಾಜದ ಪ್ರತಿಬಿಂಬವಾಗುವಂತೆ ನಿಲ್ಲಿಸಿದ್ದಾನೆ. ಹೀಗೆ ರಟ್ಟರಸರು ಸಮಾಜದಲ್ಲಿ ಒಳ್ಳೆಯ ರೀತಿಯಿಂದ ಬಾಳಿ ಪ್ರಜೆಗಳಿಗೆ ಮಾರ್ಗದರ್ಶಿಗಳಾಗಿದ್ದಾರೆ.

## ಶಾಸನಗಳಲ್ಲಿ ಮಹಿಳೆ

### ಸಮಾಜದಲ್ಲಿ ಮಹಿಳೆಯ ಸ್ಥಾನ

'ನ ಪುತ್ರಸ್ಯ ಲೋಕೋಸ್ತೆ' ಎಂಬ ಧೋರಣೆ ಬಲವಾಗಿದ್ದ ಕಾಲದಲ್ಲಿ ಗೃಹಿಣಿಯಾದವಳ ಸಾರ್ಥಕತೆ ತಾಯ್ತನವಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಈಕೆ ವೀರಪತಿಯನ್ನು ಕೈಹಿಡಿದು ವೀರಪತ್ನಿಯೆನಿಸಿದರೆ, ವೀರಪುತ್ರರನ್ನು ಪಡೆದು ವೀರಮಾತೆಯೆನಿಸಿಕೊಳ್ಳಲು ಇಷ್ಟಪಡುತ್ತಿದ್ದರು. ಇದಕ್ಕೆ ಸವದತ್ತಿ ಮಹಿಳೆಯರು ಹೊರತಾಗಿರಲಿಲ್ಲ. ಪಡೆಯುವ ಮಗು ಎಂತಹದರಿಬೇಕೆಂಬ ವಿಷಯದ ಬಗೆಗೆ ಸವದತ್ತಿ ಶಾಸನಗಳು ತಮ್ಮ ಗಮನ ಸೆಳೆಯುತ್ತದೆ.

ಅದೆಷ್ಟೋ ಸ್ತ್ರೀಯರು ಹೊಸ್ತಿಲನಿಂದ ಹೊರಬಂದು ಸಮಾಜ ಕಾರ್ಯದಲ್ಲಿ ತೊಡಗಿ ಧಾರ್ಮಿಕ ಕಾರ್ಯದಿಂದ ನಾಡು-ನುಡಿಗೆ ಸೇವೆ ಸಲ್ಲಿಸಿದ ಉದಾಹರಣೆಗಳನ್ನು ಕಾಣಬಹುದು. ಧಾರ್ಮಿಕ ಕ್ಷೇತ್ರದಲ್ಲಿ ಸ್ತ್ರೀಯರು ವಹಿಸಿದ ಪಾತ್ರ ಮಹತ್ವದ್ದಾಗಿದೆ. ದೇವಾಲಯಗಳನ್ನು ಕಟ್ಟಿಸಿ ಅವುಗಳ ಅಂಗಭೋಗ, ರಂಗಭೋಗಕ್ಕೆ ದಾನ ಕೊಡುವದರಲ್ಲಿ ಗಣನೀಯ ಸ್ಥಾನ ವಹಿಸಿದ್ದರು.

ಕುಲಪುತ್ರ ಹುಟ್ಟಿದ ಮನೆಯೊಂದರ ಭಾಗ್ಯಜ್ಯೋತಿಯನ್ನು ಬೆಳಗಿದರೆ, ಕುಲಪುತ್ರಿ ಬೆಳಗುವವರು ಹುಟ್ಟಿದ ಮತ್ತು ಕೊಟ್ಟ ಮನೆಗಳ ಭಾಗ್ಯಜ್ಯೋತಿಯನ್ನು. ಇದನ್ನು ಮನಗಂಡು ಪ್ರಮಾಣಿಸಿ ನೋಡಿದ ಈ ರಟ್ಟರಸರು ಪುರುಷವರ್ಗ ಗೃಹಿಣಿ ಪದಕ್ಕೆ ಹೆಚ್ಚಿನ ಗೌರವ ಕೊಡುತ್ತಾ ಬಂದಿದ್ದಾರೆ.

ರಟ್ಟರಾಜರ ಸ್ತ್ರೀಯರಲ್ಲಿಯೇ ಚಂದಲದೇವಿ ವಿಶೇಷ ರೀತಿಯಲ್ಲಿ ಕಂಗೊಳಿಸಿ ಕೊಡುಗೈ ದೊರೆಸಾನಿಯಾಗಿ, ಶರಣಾಗತರ ರಕ್ಷಕಿಯಾಗಿ, ವಲ್ಲಭನ ಮನೋವಲ್ಲಭೆಯಾಗಿ 'ಧರಣೀಪತಿ ಲಕ್ಷ್ಮೀದೇಚನಾಜಾಮಾತ್ರಂ' ಎಂದು ಹಣ್ಣಿಕೇರಿಯ ಶಾಸನದಲ್ಲಿ ಅವಳಲ್ಲಿದ್ದ ಸುಗುಣಗಳನ್ನು ಹೇಳಲಾಗಿದೆ.

**೪.೨ ಸ್ತ್ರೀ ಶಿಕ್ಷಣ :**

'ಅಕ್ಷರ ಶಿಕ್ಷಣಕ್ಕಿಂತ ಕಲಾ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದರು. 'ನೃತ್ಯ ವಿದ್ಯಾಧರಿ, ಸಕಳಕಳಾಧರಿ, ಸರಸ್ವತಿ, ಪ್ರತ್ಯತ್ಮನ್' ಎಂಬ ಬಿರುದುಗಳಿಂದ ತಿಳಿದುಬರುತ್ತದೆ. ವಿದ್ಯಾಕೇಂದ್ರದಲ್ಲಿ ವಿದ್ಯಾಗುರುಗಳು ಇರುತ್ತಿದ್ದರು. ಕೆಲವು ಗುರುಗಳು ರಾಜಾಶ್ರಯದಲ್ಲಿ ನಿಂತು ರಾಜನಿಗೆ ಶಿಕ್ಷಣ ಕೊಡುತ್ತಿದ್ದಂತೆ "ಲಕ್ಷ್ಮೀ ಪಾರೀಶಂ ರಟ್ಟರಾಜ ಗುರು ಮುನಿಚಂದ್ರಂ" ಇದರಿಂದ ಗೊತ್ತಾಗುತ್ತದೆ.

ರಟ್ಟರ ಕಾಲದಲ್ಲಿ ವಿಶೇಷವಾಗಿ ಸ್ತ್ರೀಯರು ಲಲಿತಕಲೆಗಳಲ್ಲಿ ಪರಿಣತಿಯನ್ನು ಪಡೆದಿದ್ದರು. ಕಸೂತಿ, ಹೆಣಿಕೆ ಮುಂತಾದವುಗಳಲ್ಲಿ ತಮ್ಮ ಕುಶಲತೆಯನ್ನು ತೋರಿಸುತ್ತಿದ್ದರು. ರಟ್ಟರಾಜರ ರಾಣಿಯರೂ ಕೂಡಾ ಇದಕ್ಕೆ ಹೊರತಾಗಿರಲಿಲ್ಲ.

### ೪.೩ ಆಡಳಿತದಲ್ಲಿ ರಾಣಿಯರು

**ರಾಣಿಲಕ್ಷ್ಮೀದೇವಿ (ಕ್ರಿ.ಶ. ೧೧೯೪)**

ಇವಳು ರಟ್ಟರ ೨ನೆಯ ಸೇನನ ಪತ್ನಿ.[೪೩] ಇದನ್ನು ರಾಯಭಾಗದ ಶಾಸನ–

"ಸೇನಮಹೀಭೂಭುಜಂಭುಜಬಳಾ
ನ್ವಿತನಪ್ರತಿಮಪ್ರಭಾವದಿಂ। ಆ ವಸುಧಾಧೀಶಂಗಂಲಾವಾಣ್ಯಾಂಭೋ
ನಿಧಾನಲಹರಿಕೆ ಲಖಿಮಾದೇವಿ"

ಎಂದು ಸ್ಪಷ್ಟಪಡಿಸಿದೆ.[೪೪] ಈಕೆ ೨ನೆಯ ಸೇನನ ರಾಜ್ಯಭಾರದಲ್ಲಿ ಸಹಕಾರಿಯಾಗಿ ಸಲಹೆಗಳನ್ನು ನೀಡುತ್ತಿದ್ದಳು. ಈಕೆಗೆ ೩ನೆಯ ಕಾರ್ತ್ತವೀರ್ಯನೆಂಬ ಮಗನಿದ್ದನು. ಈಕೆ ಅತ್ಯಂತ ಸುಂದರಿಯೂ, ಲಾವಣ್ಯವತಿಯೂ, ಜಿನಭಕ್ತೆಯೂ ಆಗಿದ್ದಳು. ೨ನೆಯ ಸೇನನಿಗೆ ಲಕ್ಷ್ಮೀದೇವಿಯು ಅತ್ಯಂತ ಪ್ರೀತಿಗೆ ಪಾತ್ರಳಾದಂತೆ ಶಾಸನದಂತೆ ಸ್ಪಷ್ಟವಾಗುತ್ತದೆ.

**ಸತಿ ಕನಕಿ (ಕ್ರಿ.ಶ. ೧೦೮೮)**

ಚಾಮುಂಡನ ಪತ್ನಿಯಾದ ಈಕೆ ಪರಮ ಜಿನಭಕ್ತಿಯಾಗಿದ್ದಳು.[೪೫] ತನ್ನ ಪತಿಗೆ ಸಹಕಾರಿಯಾಗಿದ್ದಳು. ಕೊಣ್ಣೂರಿನ ಶಾಸನದಲ್ಲಿ ಈಕೆಯನ್ನು ಹೀಗೆ

"ದಳಲೋಚನೆಚಕ್ರವಾಕಕುಚೆಕನಕಲತೋ।

ಜ್ವಳಮಧ್ಯೆ ಕನಕಿಚಾಮು॥"

ಎಂದು ವರ್ಣಿಸಲಾಗಿದೆ. ಉತ್ತಮ ಕುಲವಳೂ, ಸುಂದರವಾದ ಕಣ್ಣುಗಳನ್ನು ಹೊಂದಿದವಳೂ, ಚಕ್ರವಾಕ ಪಕ್ಷಿಯಂತೆ ಉಬ್ಬಿರುವ ಎದೆಯವಳು, ಬಂಗಾರದಂತೆ ಹೊಳೆಯುವಳೂ ಆದ ಕನಕಿಯು ಚಾವುಂಡನ ಮನೋವಲ್ಲಭೆಯಾಗಿ, ರತಿಯಂತೆ ಸುಂದರವಾಗಿದ್ದಳೆಂಬುದು ಇಲ್ಲಿ ಭಾವ.

**ರಾಣಿ ಪದ್ಮಲಾದೇವಿ (ಕ್ರಿ.ಶ. ೧೧೩೦–೫೩)**

ಇವಳು ೩ನೆಯ ಕಾರ್ತವೀರ್ಯನ ಪತ್ನಿ. ಬೆಳಗಾವಿ ಶಾಸನದಲ್ಲಿ –

"ಸ್ಥಿತಿಕಾರಿಣಿವಿಮಲಗುಣಾ।

ನ್ವಿತೆಪದ್ಮಲಾದೇವಿಕಾರ್ತ್ತವೀರ್ಯಧರಿತ್ರೀ।

ಪತಿದಯಿತೆತಾಂತ್ರಿವರ್ಗೋ೦।

ನತಸಾಧಿಕೆಯಪರನೀತಿವಿದ್ಯೆವೊಲೆಸೆವಳ್‌॥"

ಎಂದಿರುವುದರಿಂದ ರಟ್ಟರ ೩ನೆಯ ಕಾರ್ತವೀರ್ಯನ ಪತ್ನಿ ಪದ್ಮಲಾದೇವಿಯೆಂದು ಸ್ಪಷ್ಟವಾಗುತ್ತದೆ. ಈಕೆ ಅತ್ಯಂತ ಸುಂದರಳೂ, ಪತಿಭಕ್ತೆಯೂ ಸಕಲ ವಿದ್ಯೆಯಲ್ಲಿ ಪಾರಂಗತಳೂ ಆಗಿದ್ದಳು. ಈಕೆಯನ್ನು ಕುರಿತು ಬೆಳಗಾವಿ ಶಾಸನದಲ್ಲಿ–

"ವಿನತರಿಪುಪ್ರತಿಬಿಂಬಾ ।

ಟೆನಿತಾಂತಂಕಾರ್ತ್ತವೀರ್ಯಪನಖದೊಟ್ಚಿ

ಲ್ವೆನಿಕುಂಪೂರ್ವ್ವಪದಾಶ್ರಿತ ।

ರನಲಿದುತನ್ಮಂತ್ರಕೃತಿಗೆ ಪಡೆದಪ್ಪುವವೊಲ್ ।"

ಎಂದು ವರ್ಣಿಸಲಾಗಿದೆ.[೪೬] ೩ನೆಯ ಕಾರ್ತವೀರ್ಯನ ಮುಖದಲ್ಲಿ ಆಕೆಯ ಸೌಂದರ್ಯದ ಪ್ರತಿಬಿಂಬ ಬೀಳುತ್ತಿತ್ತು. ಅವನಿಗೆ ತಕ್ಕಂತಹ ಸೌಂದರ್ಯವತಿಯಾಗಿದ್ದಳು. ಪತಿಗೆ ತಕ್ಕಂತಹ ಕನ್ನಿಕೆಯಾಗಿದ್ದಳೆಂದು ಕವಿ ಬಾಳಚಂದ್ರ ಈಕೆಯನ್ನು ಹೊಗಳಿದ್ದಾನೆ. ಈಕೆಯನ್ನು ರಾಯಭಾಗ ಶಾಸನದಲ್ಲಿ–'ನಿರೇರುಹಪತ್ರನೇತ್ರ ಪದ್ಮಾವತಿ' ಎಂದು ವರ್ಣಿಸಲಾಗಿದೆ. ಕಮಲದಂತಹ ಕಣ್ಣುಗಳನ್ನುಳ್ಳ ಪದ್ಮಲದೇವಿಯು ಅತ್ಯಂತ ಸೌಂದರ್ಯವತಿಯಾಗಿದ್ದಳು.

ಪದ್ಮಲದೇವಿಯು ಸೌಂದರ್ಯವತಿಯಾಗಿದ್ದಂತೆಯೆ ವಿದ್ಯಾವಂತೆಯೂ ಆಗಿದ್ದಳೆಂದು ಕಲ್ಹೊಳಿ ಶಾಸನ–

"ಆ ವಿಭುವಿನ ವಧು ಪದ್ಮಲ ।

ದೇವಿಕಲಾರೂಪವಿಭವಜಿನಮತದೊಳ್ವಾ ।

ಗ್ದೇವಿರತಿದೇವಿಲಕ್ಷ್ಮೀ ।

ದೇವಿಶಚಿದೇವಿಯೆನಿಸಿಮಿಗೆ ಸೊಗಯಿಸುವಳ್ ।"

ಎಂದು ವರ್ಣಿಸಲಾಗಿದೆ.[೪೭] ರಟ್ಟರ ೩ನೆಯ ಕಾರ್ತವೀರ್ಯನ ಪತ್ನಿ ಪದ್ಮಲದೇವಿಯು ಕಳಾವಂತೆಯೂ, ಜೈನಧರ್ಮದ ಸಾರವನ್ನು ಬಲ್ಲವಳೂ, ಜೈನಧರ್ಮದ ತಿರುಳನ್ನು ನಿರರ್ಗ್ಗಳವಾಗಿ ಹೇಳುವ ವಾಗ್ಮಿಯೂ, ರತಿಯಂತೆ ಸುಂದರಳೂ, ಲಕ್ಷ್ಮೀದೇವಿಯಂತೆ ಐಶ್ವರ್ಯವಂತೆಯೂ, ಶಚಿದೇವಿಯೂಯೆನ್ನಿಸಿದ್ದಳು. ಈಕೆ ಈ ರಟ್ಟ ಸಾಮ್ರಾಜ್ಯದಲ್ಲಿ ಶೋಭಾಯಮಾನಳಾಗಿದ್ದಳು.

೩ನೆಯ ಕಾರ್ತವೀರ್ಯನ ಪತ್ನಿ ಪದ್ಮಲಾದೇವಿಯು ಜೈನಧರ್ಮದ ಬಗ್ಗೆ ಅಪಾರ ಗೌರವ, ಆದರ, ನಂಬಿಕೆಗಳನ್ನಿಟ್ಟುಕೊಂಡಿದ್ದಳು. ಅದನ್ನು ಬೆಳೆಸಿ, ಉಳಿಸಿಕೊಂಡು ಬರುವಲ್ಲಿ ಅಪಾರ ಸೇವೆಯನ್ನು ಮಾಡಿದ್ದಾಳೆ.

**ರಾಣಿ ಚಂದಲದೇವಿ (ಕ್ರಿ.ಶ. ೧೧೭೦-೧೧೯೦)**

ಇವಳು ಸವದತ್ತಿ ರಟ್ಟರ ೧ನೆಯ ಲಕ್ಷ್ಮೀದೇವನ ಹೆಂಡತಿ. ಇವರಿಗೆ ೪ನೆಯ ಕಾರ್ತವೀರ್ಯ ಮಲ್ಲಿಕಾರ್ಜುನರೆಂಬ ಇಬ್ಬರು ಮಕ್ಕಳು. ರಾಣಿಚಂದಲದೇವಿಯು ಹಗರಟಗೆನಾಡಿನ ಯದುವಂಶದ ರಾಜ ಪುತ್ರಿ.[೪೮] ಈಕೆಯ ತಂದೆ ರಾಜರಸ, ತಾಯಿ ಮೈಳಲದೇವಿ. ಇವಳಿಗೆ ಸಿಂಹಮಹಿಪನೆಂಬ ತಮ್ಮನಿದ್ದನು. ಶಾಸನಗಳಲ್ಲಿ ಇವಳನ್ನು - ಚಂದಲದೇವಿ, ಚಂದ್ರಿಕಾದೇವಿ, ಚಂದ್ರಿಕೆ ಎಂಬ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇವಳು ೧ನೆಯ ಲಕ್ಷ್ಮೀದೇವನಿಗೆ ರಾಜ್ಯ ಆಡಳಿತದಲ್ಲಿ ಸಲಹೆಗಳನ್ನು ಕೊಡುತ್ತಿದ್ದಳು. ಕವಿ ನೇಮಿಚಂದ್ರನು ತನ್ನ ಲೀಲಾವತಿ ಪ್ರಬಂಧದಲ್ಲಿ ಚಂದ್ರಿಕಾದೇವಿಯನ್ನು 'ಅಂಬುಧಿವೇಷ್ಠಿತಾವನಿಗೆ ಲಕ್ಷಣದೇವನೆ ರಾಜನೆಂದು ಲೋಕಾಂಬಿಕೆಯಪ್ಪಪುಣ್ಯಸತಿ ಚಂದಲದೇವಿಯೆಂದು ಸೇವ್ಯಂ ಬುಧನೇಮಿಚಂದ್ರನೆ ಕವೀಶ್ವರನೆಂದು ಧರೆಯಂ ರಕ್ಷಿಸುತ್ತಿರ್ಕೆ ಲಕ್ಕಬರಿಸಂ ಲಕ್ಷ್ಮೀಧರೋರ್ವಿಶ್ವರಂ ಸಿರಿಯಂತಾತನ ತೋಳೊಳಿರ್ಕೆ ಸತತಂ ಶ್ರೀಚಂದ್ರಿಕಾದೇವಿ' ಎಂದು ವರ್ಣಿಸಿದ್ದಾನೆ.

**ರಾಣಿ ಏಚಲಾದೇವಿ (ಕ್ರಿ.ಶ. ೧೧೯೯)**

ಇವಳು ಸವದತ್ತಿ ರಟ್ಟರ ೪ನೆಯ ಕಾರ್ತವೀರ್ಯನ ಹೆಂಡತಿ.[೪೯] ಇವರ ಮಗ ೧ನೆಯ ಲಕ್ಷ್ಮೀದೇವ. ಪಾರ್ಶ್ವಪಂಡಿತನು ಕಲ್ಹೊಳೆ ಶಾಸನದಲ್ಲಿ ಈಕೆಯನ್ನು -

"ಶ್ರೀಚಕ್ರವರ್ತಿತ ।
ನುಜೆಕಾಳಾದರೆವಿಶಾಳಲೋಚನೆಯೆನಿಸಿ ।
ರ್ದೇಚಲದೇವಿಸತೀತ್ವಸು ।
ಲೋಚನೆಯೆನೆಕಾರ್ತವೀರ್ಯವಧು ಪೆಸರ್ವಡೆದಳ್।"

ಎಂದು ವರ್ಣಿಸಿದ್ದಾನೆ. ಚಕ್ರವರ್ತಿಯ ಮಗಳೆಂದಿರುವದರಿಂದ ಈಕೆ ಹಗರಟೆಯ ಯದುವಂಶದ ಅರಸನ ಮಗಳಾಗಿರುವಂತೆ ತೋರುತ್ತದೆ. ಶಾಮವರ್ಣೆ, ವಿಶಾಲ ನೇತ್ರೆ, ಸತಿಶಿರೋಮಣಿಯಾಗಿದ್ದ ಈಕೆ ಕಾರ್ತವೀರ್ಯನೊಂದಿಗೆ ಹೆಸರು ಪಡೆದುಕೊಂಡವಳಾಗಿದ್ದಳು. ಈಕೆ ಶಿವಭಕ್ತೆಯಾಗಿದ್ದು ನೇಸರಿಗೆಯಲ್ಲಿ ಹೆಚ್ಚೇಶ್ವರ ದೇವಾಲಯ, ಮಾಣಿಕ್ಕೇಶ್ವರ (ಜೈನ), ವೀರಭದ್ರ ದೇವಾಲಯಗಳನ್ನು, ಸೌದತ್ತಿಯಲ್ಲಿ ಅಂಕೇಶ್ವರದೇವಾಲಯವನ್ನೂ ಕಟ್ಟಿಸಿದ್ದಾಳೆ. ಡಾ.ಇಚ್ಚಂಗಿಯವರು ತಮ್ಮ ಪ್ರಬಂಧದಲ್ಲಿ ಈಕೆ ನೇಸರಗಿಯ ಬಸದಿಯಲ್ಲಿ ವೀರಭದ್ರನನ್ನು ಪ್ರತಿಷ್ಠಾಪಿಸಿ ವೀರಶೈವ ಮತಕ್ಕೆ ತನ್ನ ಗೌರವ ಸಲ್ಲಿಸಿದ್ದಾಳೆಂದು ಅಭಿಪ್ರಾಯಪಟ್ಟಿದ್ದಾರೆ.[೫೦] ಶೈವ ಹಾಗೂ ಜೈನ ದೇವಾಲಯಗಳನ್ನು ಕಟ್ಟಿಸಿದ ಏಚಲಾದೇವಿಯು ಬಸದಿಯಲ್ಲಿ ಮೂರ್ತಿಯನ್ನು ತೆಗೆದು ವೀರಭದ್ರನ ಮೂರ್ತಿಯನ್ನು ಕೂಡ್ರಿಸಿದಳೆಂದು ತಪ್ಪು ಗ್ರಹಿಕೆಯಾಗಿದೆ. ಪ್ರಸ್ತುತ ಗ್ರಾಮದಲ್ಲಿರುವ ವೀರಭದ್ರ ದೇವಾಲಯವು ಮೂಲತಃ ಬಸದಿಯಾಗಿತ್ತು. ರಾಣಿ ಏಚಲಾದೇವಿ ಬಸದಿಯಲ್ಲಿಯ ಮೂರ್ತಿಯನ್ನು ತೆಗೆಸಿಲ್ಲವೆಂದು ಸ್ಪಷ್ಟವಾಗುತ್ತದೆ.

### ೪.೪ ಆರ್ಥಿಕ ವ್ಯವಸ್ಥೆ

ಪ್ರಾಚೀನ ಕರ್ನಾಟಕ ಆರ್ಥಿಕ ವ್ಯವಸ್ಥೆಯನ್ನರಿಯಲು ಶಾಸನಗಳು ಹೆಚ್ಚಿನ ರೀತಿಯಲ್ಲಿ ಸಹಾಯಕವಾಗಿವೆ. ಪ್ರಾಚೀನ ಕಾಲದಿಂದಲೂ ಹಣಕ್ಕೆ ಬಹಳ ಪ್ರಾಮುಖ್ಯತೆ ಇದೆ. ಆರ್ಥಿಕವಾಗಿ ಆ ನಾಡು ಸಂಪತ್ ಭರಿತವಾಗಿದ್ದರಿಂದಲೇ ಅಲ್ಲಿ ಹಣಕ್ಕೆ ಬೆಲೆ ಇತ್ತು. ಜನರು ಸಮೃದ್ಧವಾಗಿದ್ದಾರೆ ಎಂದರೆ ಅಲ್ಲಿನ ಭೂಮಿ ಹಾಗೂ ಕೃಷಿ ಚಟುವಟಿಕೆಯಲ್ಲಿ ಕಾರ್ಯ ಸಾಧನೆ ಆಗಿರಬೇಕು.

ಅದರಂತೆ ರಟ್ಟರ ಕಾಲದ ಕುಹುಂಡಿ-ಮಂಡಲದ ಪ್ರಕೃತಿ ಸಂಪತ್ತು ಹೇರಳವಾಗಿದ್ದು ಕೆರೆ, ಸರೋವರ ಭತ್ತ ಗದ್ದೆಗಳಿಂದ ಕಂಗೊಳಿಸುತ್ತಿದ್ದಿತ್ತು. ಹೊಲಗದ್ದೆಗಳಲ್ಲಿ ಫಲವತ್ತಾದ ಫಸಲುಗಳಿಂದ ಈ ನಾಡು "ಬೆಳಸುಂದುಂ ಕುಂದದ ವಿಪುಲ ಫಲಚಯಂ ಈಮಧಾನ್ಯಂ" ಎನಿಸಿಕೊಂಡಿರುತ್ತು.

ರಟ್ಟರ ಆಡಳಿತ ವಿಭಾಗವಾದ ನೇಸರಿಗೆಯು ಮತ್ತೊಂದು ವಿಭಾಗವಾದ ತೇರದಾಳವಂತೂ ಸಂಪದ್ಭರಿತವಾಗಿತ್ತು. ರಾಜಧಾನಿಯಾದ ವೇಣುಗ್ರಾಮವು ರಸಭರಿತವಾದ ಹಣ್ಣಿನ ತೋಟಗಳಿಂದ ಸುಂದರವಾದ ಮನೆಗಳಿಂದಲೂ, ಸೌಧಗಳಿಂದಲೂ ಕಂಗೊಳಿಸುತ್ತಿತ್ತು.

#### ನಾಣ್ಯಗಳು

ಕರ್ನಾಟಕದಲ್ಲಿ ವ್ಯಾಪಾರ ವಹಿವಾಟುಗಳಲ್ಲಿ ನಾಣ್ಯಗಳನ್ನು ಬಳಸುವ ಪದ್ಧತಿ ಪ್ರಾರಂಭ ಕಾಲದಿಂಲದೂ ಬಳಕೆಯಲ್ಲಿತ್ತು. ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳೆಂದರೆ ಚಿನ್ನ, ಬೆಳ್ಳಿ, ತಾಮ್ರ, ಕಂಚಿನ ನಾಣ್ಯಗಳು ಕಂಡುಬರುತ್ತವೆ. ನಾಣ್ಯಗಳಲ್ಲಿ ಗದ್ಯಾಣ, ಪೊನ್ನ್‌ಗಳು ಚಿನ್ನವಾದರೆ,

ಹಾಗವು ಬೆಳ್ಳಿಯ ನಾಣ್ಯವಾಗಿತ್ತು. ನಾಣ್ಯಗಳಲ್ಲಿ ಪ್ರಸಿದ್ಧ ಪಡೆದಿದ್ದು, ಗದ್ಯಾಣ ಅಥವಾ ಪೊನ್. ಇದರ ತೂಕ ೯೬ ಗ್ರಾಂ ಎಂದು ಡಾ. ಅಳ್ತೇಕರರು (The Rastrakutas and Their Times; P-367) ಅಭಿಪ್ರಾಯಪಟ್ಟಿದ್ದಾರೆ.

ನಾಣ್ಯಗಳಲ್ಲಿ ಹೂನ್ಹಾಗ ಬೆಳ್ಳಿಹಾಗ ಮತ್ತು ಹಿರಿಯ ಹಾಗ ಎಂಬ ಮೂರು ಪ್ರಕಾರಗಳಲ್ಲಿ 'ಹಿರಿಯಹಾಗ'ವು ರಟ್ಟರ ಕಾಲದಲ್ಲಿತ್ತು ಎನ್ನುವುದು ಬೆಳಗಾವಿ ಶಾಸನದಿಂದ ತಿಳಿಯುತ್ತದೆ. ವ್ಯವಹಾರದಲ್ಲಿ ಚಲಾವಣೆಯಲ್ಲಿದ್ದ ನಾಣ್ಯಗಳು – ೧) ಗದ್ಯಾಣ = ಹತ್ತು ಪಣ ಅಥವಾ ಹಣಕ್ಕೆ ಸಮನೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ೧ ಪಣ= ಎರಡು ಅಪ್ಪ(ಸ.ಅರ್ಧ: ಪಾಲಿ ಅಪ್ಪ) ಪಾಣಿನಿಯಲ್ಲಿ ಅರ್ಧ ಎಂಬ ನಾಣ್ಯದ ಹೆಸರಿದೆ. ೧ ಪಣ= ನಾಲ್ಕು ಭಾಗ, ೧ ಪಣ = ಹದಿನಾರು ವೀಸ. ೧ ಹಾಗ= ಎರಡು ಬೆಳೆ. ಗದ್ಯಾಣ, ಪಣ, ಅಪ್ಪ, ಹಾಗ, ಬೆಳೆ, ವೀಸ್ ಇವೆಲ್ಲವೂ ಪ್ರತ್ಯೇಕ ನಾಣ್ಯಗಳೆಂದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

ಈ ಪ್ರಕಾರ ಕುಹುಂಡಿ ಮಂಡಲದ ರಾಯಬಾಗದಲ್ಲಿದ್ದ ರಾಜಾದಿತ್ಯನು ತನ್ನ ವ್ಯವಹಾರ ಗಣಿತದಲ್ಲಿ ತಿಳಿಸಿದ್ದಾನೆ. ದಾನಿಗಳು ಭೂದಾನ ಮಾಡುವಂತೆ ಹಣದ ದಾನವನ್ನು ಮಾಡುತ್ತಿದ್ದರೆನ್ನಲು ಉದಾಹರಣೆಗಳುಂಟು. ಪುಟ್ಟಸ್ವಾಮಿ ಎಂಬ ಶ್ರೀಮಂತನು ೧೦೦ ಗದ್ಯಾಣಗಳನ್ನು ಖರ್ಚು ಮಾಡಿ ಹಳ್ಳಕ್ಕೆ ಒಡ್ಡು ಹಾಕಿಸಿದನು ಎನ್ನುವುದು ಶಾಸನದಿಂದ ಗೊತ್ತಾಗುತ್ತದೆ.[೫೧]

**೪.೫ ತೆರಿಗೆ ಪದ್ಧತಿ**

ರಾಜನ ಆದಾಯದ ಬಹುಭಾಗವು ತೆರಿಗೆಗಳಿಂದ ಬರುತ್ತಿದ್ದಿತು. ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ಕೊಡುವ ಪ್ರತಿಫಲವೇ ತೆರಿಗೆಗಳೆಂದು "ಗೌತಮ ಸಂಹಿತೆ, ನಾರದ ಸಂಹಿತೆ ಮುಂತಾದ ಸ್ಮೃತಿಗಳು ಭಾವಿಸುತ್ತವೆ. ಧರ್ಮದಿಂದ ರಾಜ್ಯವನ್ನಾಳುವ ರಾಜನಿಗೆ ರಾಜ್ಯದಲ್ಲಿ ಬೆಳೆಯುವ ಬೆಳೆಯ ಆರನೆಯ ಒಂದು ಭಾಗವು ಸಲ್ಲಬೇಕೆಂದು ವಶಿಷ್ಠನು ಅಭಿಪ್ರಾಯವಿದೆ ಎಂದು ಗೊತ್ತಾಗುತ್ತದೆ.

ತೆರಿಗೆಗಳಲ್ಲಿ ಪ್ರಕಾರಗಳು –

೧) ಭೂಮಿಯ ಮೇಲಿನ ತೆರಿಗೆ
೨) ಆಸ್ತಿಯ ತೆರಿಗೆ
೩) ವೃತ್ತಿ ತೆರಿಗೆ
೪) ವಾಣಿಜ್ಯ ತೆರಿಗೆ
೫) ಕೈಗಾರಿಕೆಗಳ ಮೇಲೆ ವಿಧಿಸುವ ತೆರಿಗೆ
೬) ಇತರೆ ತೆರಿಗೆ

೧) ಭೂಮಿಯ ಮೇಲಿನ ತೆರಿಗೆ

ಪ್ರಜೆಗಳು ಮತ್ತು ರಾಜರುಗಳ ನಡುವೆ ತೆರಿಗೆಯ ಬಗ್ಗೆ ಚರ್ಚೆಯಾಗಿ ನಿರ್ದಿಷ್ಟಪಡಿಸಿದ ಒಂದು ಒಪ್ಪಂದಕ್ಕೆ ಬರುತ್ತಿತ್ತು. ದತ್ತಿಯಾಗಿ ಬಿಟ್ಟುಕೊಟ್ಟು ಭೂಮಿಗೆ ಇಷ್ಟು 'ಅರುವಣ' ಕೊಡಬೇಕೆಂದು ನಿಬಂಧಿಸುತ್ತಿದ್ದರು. "ಅಂತು ಮೂಱು ತೋಂಟಕ್ಕೆ ಮೂಱು ಮತ್ತರ್ ಕಿಸುಕಾಡಿಂಗಮರುವಣ ಮನಿತ್ತುಣ್ಬರ್" ಎಂದು ಶಾಸನದಲ್ಲಿ ಹೇಳಲಾಗಿದೆ.

ಮೂವತ್ತು ನಿವರ್ತನ ಭೂಮಿಗೆ ಏಳು ಪಣಗಳು ಇನ್ನೂರು ನಿವರ್ತನಕ್ಕೆ ಒಂದು ಗದ್ಯಾಣ ಎಂದು ರಟ್ಟರ ಸಮಕಾಲೀನ ಶಾಸನಗಳಿಂದ ಕಾಣಬಹುದು. ಅದರಂತೆ ಮನೆಗಳ ಮೇಲಿನ ತೆರಿಗೆ ಹಾಕುತ್ತಿದ್ದುದು ಗೊತ್ತಾಗುತ್ತದೆ.

೨) ವೃತ್ತಿಯ ಮೇಲಿನ ತೆರಿಗೆ

ವ್ಯಕ್ತಿಗಳು ಮಾಡುತ್ತಿದ್ದ ವೃತ್ತಿಗಳ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು. ಅದರಲ್ಲಿ ಪ್ರಮುಖವಾಗಿ ಸಾರ್ವಜನಿಕರ ಬಟ್ಟೆ ತೊಳೆದು ಕೂಡುವ ಅಗಸರು "ಅಗಸದರೆ". ವ್ಯಾಪಾರ ಸಾಮಗ್ರಿಗಳ ಮೇಲಿನ ತೆರಿಗೆಯನ್ನು "ವಡ್ಡರಾವುಳ" ಧಾನ್ಯದ ರಾಶಿಗೆ ಹಾಕುತ್ತಿದ್ದ ತೆರಿಗೆ "ಮೇಂಟೆಗಂಡುಗ".

೩) ವಾಣಿಜ್ಯ ತೆರಿಗೆ

ಮಾರುವ ಪ್ರತಿಯೊಂದು ವಸ್ತುಗಳಿಗೆ ನಿಗದಿಪಡಿಸಿದ ತೆರಿಗೆಯು ಮಾಣವಿದ್ದಂತೆ. ವೇಣುಗ್ರಾಮಕ್ಕೆ ಬಂದು ಮಾರುವ ವಸ್ತುಗಳನ್ನು ಶಾಸನದಲ್ಲಿ ಹೇಳಲಾಗಿದೆ. ಇದರ ಮೇಲಿಂದ ರಟ್ಟರ ಕಾಲದಲ್ಲಿ ವಾಣಿಜ್ಯ ತೆರಿಗೆ ಹೇಗಿತ್ತು ಎಂಬುದು ತಿಳಿಯಬಹುದು.

೪) ಕೈಗಾರಿಕೆಗಳ ಮೇಲೆ ವಿಧಿಸುವ ತೆರಿಗೆ

ಗೃಹ ಮತ್ತು ಸಣ್ಣ ಕೈಗಾರಿಕೆಗಳಾಗಿದ್ದ ಶೇಂಗಾ, ಎಳ್ಳು, ಕುಸುಬೆ, ಜೆಡಲ್ ಮುಂತಾದ ಖಾದ್ಯ ಪದಾರ್ಥಗಳಿಂದ ಎಣ್ಣೆಯನ್ನು ತೆಗೆಯುವ ಕೆಲಸವನ್ನು ಮಾಡುತ್ತಿದ್ದರು. ಅವುಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದಂತೆ ಯಕ್ಸಂಬಾ ಶಾಸನವೊಂದರಲ್ಲಿ "ಗಾಣ ದೊಕ್ಕಾಲುದೆರೆ" ಎಂಬ ತೆರಿಗೆಯನ್ನು ಹಾಕಿದ್ದರು.

೫) ಇತರೆ ತೆರಿಗೆ

ರಾಜ್ಯ ಬೊಕ್ಕಸಕ್ಕೆ ಹಣದ ಕೊರತೆಯಾದಾಗ ರಾಜನು ಶ್ರೀಮಂತರ ಆಸ್ತಿಯನ್ನು ಮುಟ್ಟುಗೋಲು ಹಾಕಿ ರಾಜ್ಯಭಾರಕ್ಕೆ ಉಪಯೋಗಿಸುತ್ತಿದ್ದನು. ಮಕ್ಕಳಿಲ್ಲದವರು, ವಾರಸುದಾರರು

ಇಲ್ಲದವರ ಆಸ್ತಿಯನ್ನು ದಾನವಾಗಿ ಸ್ವೀಕರಿಸುತ್ತಿದ್ದರೆಂಬುದಕ್ಕೆ ರಟ್ಟರ ಕಾಲದ ಸಂಕೇಶ್ವರದ ಶಾಸನದಲ್ಲಿ ಹೇಳಲಾಗಿದೆ.

**೪.೬ ಅಳತೆ ಮಾಪಕಗಳು**

ಪ್ರಾಚೀನ ಕಾಲದಲ್ಲಿ ಎರಡು ರೀತಿಯಿಂದ ಹೊಲಗಳನ್ನು ಅಳೆಯುವ ಪದ್ಧತಿ ಕಂಡುಬರುತ್ತದೆ. ಒಂದು ಭೂಮಿಯಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಇನ್ನೊಂದು ಅಳತೆ ಗೋಲುಗಳಿಂದ ಅಳೆಯುವುದು, ಅಳತೆಯ ಗೋಲುಗಳ ಸಹಾಯದಿಂದ ಹೊಲಗಳನ್ನು "ಮತ್ತರು" ಮತ್ತು "ಕಮ್ಮ"ಗಳೆಂಬುದಾಗಿ ಅಳೆಯುತ್ತಿದ್ದರು. ಮಾಪಕಗಳು ಹೆಚ್ಚಾಗಿ ಧವಸ, ಧಾನ್ಯಗಳ ಅಳತೆಯಲ್ಲಿ ಉಪಯೋಗವಾಗುತ್ತಿದ್ದವು.

ಗೇಣು, ಕೋಟೆ, ಮೊಳ, ಮಾರು ಒಂದಾಳಳತೆ ಮುಂತಾದ ಅಳತೆಗಳು ರಟ್ಟರು ತಮ್ಮ ಕಾಲದಲ್ಲಿ ಬಳಸುತ್ತಿದ್ದಂತೆ ಗೊತ್ತಾಗುತ್ತದೆ. ಐವತ್ತುಗೇಣು ಮತ್ತು ಇರ್ಪತ್ತೆಂಟು ಗೇಣುಗಳು ಐವತ್ತೆರಡು ಗೇಣುಗಳೆ, ಹದಿನಾರು ಗೇಣಕೊಲ್ ಇತ್ಯಾದಿಗಳನ್ನು ನೋಡಬಹುದು.

ಸಾರ್ವಜನಿಕರು ಭಕ್ತಿಭಾವಗಳಿಂದ ನಡೆದುಕೊಳ್ಳುವ ಸಾಂಸ್ಕೃತಿಕ ಕೇಂದ್ರಗಳಾಗಿರುವ ದೇವಾಲಯಗಳ ಗೋಡೆಗಳ ಮೇಲೊಂದು ಅಳತೆಯನ್ನು ಗುರುತಿಸುತ್ತಿದ್ದಂತೆಯೂ ಆ ಅಳತೆಗಳ ದೇವಾಲಯದ ಹೆಸರನ್ನು ಕೊಡುತ್ತಿದ್ದರು. ಉದಾಹರಣೆಗೆ ಬಡ್ಲಿ ಶಾಸನದಲ್ಲಿ ಬಡ್ಲಿ ಊರಲ್ಲಿ ಪ್ರಸಿದ್ಧವಾಗಿದ್ದ ಬಾಲಕೃಷ್ಣದೇವರ ಹೆಸರಿನಿಂದ ಒಂದು ಅಳತೆ ಕೋಲಿತ್ತು. ಅದಕ್ಕೆ "ಬಾಲಕೃಷ್ಣದೇವರಕೆಯ್ಯಂ" ಎನ್ನಲಾಗಿದೆ.

ಪ್ರಸಿದ್ಧ ತೀರ್ಥಗಳ ಹೆಸರಿನಿಂದಲೂ ಕೋಲಳತೆ ಇದ್ದಂತೆ ರಟ್ಟರ ಶಾಸನಗಳಲ್ಲಿ ಹೇಳಿದೆ. ಅದು 'ಎಳೆರಾವೆ ತೀರ್ಥಧ ಗಡಿಂಬ" ಇದು ಭೂಮಿಯ ಅಳತೆಯ ಒಂದು ಪ್ರಮಾಣ.

ಭೂ ಅಳತೆಯಲ್ಲಿ ಕಂಬ ಮತ್ತಾರು, ಗಡಿಂಬ, ಹಸ್ತ ಮುಂತಾದ ಅಳತೆಗಳಿಂದ ಭೂ ಅಳತೆ ಮಾಡುತ್ತಿದ್ದರು. ಸವದತ್ತಿಯ ೧೨೨೮ರ ಶಾಸನದಲ್ಲಿ "ಸೊಗಲದಡಿಗೇಶ್ವರ ದೇವರ ಕೋಲಲಳೆದು ಕೊಟ್ಟಕೆಯಿ ಕಂಬ ಮುನ್ನೂರು" ಎಂದು ಶಾಸನದಲ್ಲಿ ಕೊಡಲಾಗಿದೆ.
ರಟ್ಟರ ಕಾಲದ ಗ್ರಂಥದಿಂದ ಪ್ರಮಾಣಬದ್ಧವಾದ ಭೂ ಅಳತೆಗಳನ್ನು ಸಂಕ್ಷಿಪ್ತವಾಗಿ ಕಾಣಬಹುದು.

೧) ೧ ಯೋಜನ : ೪೦೦೦ ಕ್ರೋಶ್

೨) ೧ ಕ್ರೋಶ : ೨೦೦ ದಂಡ

೩) ೧ ದಂಡ : ೪ ಮೊಳ

೪) ೧ ಮೊಳ : ೨ ಗೇಣು

೫) ೧ ಗೇಣು : ೧೨ ಬೆರಳು

ಕಾಳು–ಕಡಿ, ಎಣ್ಣೆ ಮುಂತಾದವುಗಳನ್ನು ಅಳತೆ ಮಾಡಲಿಕ್ಕೆ ಕೊಳಗ, ಬಳ್ಳ, ಮಾನಚ, ವಮ್ಮನ, ಖಂಡಗ ಇತ್ಯಾದಿ ಹೆಸರುಗಳು ಶಾಸನಗಳಲ್ಲಿ ಸಿಕ್ಕುತ್ತವೆ. ಬೇರೆ ಬೇರೆ ಕಡೆ ಬಳಸುತ್ತಿದ್ದ ಕೊಳಗಗಳಿಗೆ ಬೇರೆ ಬೇರೆ ಹೆಸರುಗಳನ್ನಿಡುತ್ತಿದ್ದರು. ಕೊಳಗಗಳಲ್ಲಿ 'ದೇವಗೊಳಗ', 'ದಮಗೊಳಗ', ಜಕ್ಕಗೊಳಗ', 'ಧರ್ಮಗೊಳವನ ಗೊಳಗ' ಮುಂತಾದವುಗಳು ಬೇರೆ ಬೇರೆ ಅಳತೆ ಮತ್ತು ತೂಕಗಳು ರಟ್ಟರ ಕಾಲದಲ್ಲಿ ಇದ್ದವು. ಅದರ ಕೋಷ್ಟಕವನ್ನು ಕೆಳಗೆ ಕೊಡಲಾಗಿದೆ. (ಈ ಅಳತೆಯ ಪಟ್ಟಿಯನ್ನು ರಾಜಾದಿತ್ಯನೂ ಹೇಳಿದ್ದಾನೆ.)

| | | | |
|---|---|---|---|
| ೧ ಖಂಡುಗ | = ೪ ಪಂಚಕ | ೧ ಭಾರ | = ೨೦ ತೊಲ |
| ೧ ಪಂಚಕ | = ೫ ಕೊಳಗ | ೧ ತೊಲ | = ೫ ಬೀಸಗೆ |
| ೧ ಕೊಳಗ | = ೪ ಬಳ್ಳ | ೧ ಬೀಸಗೆ | = ೨೦ ಫಲ |
| ೧ ಬಳ್ಳ | = ೪ ಮಾನ | ೧ ಫಲ | = ೪ ಕರ್ಷ |
| ೧ ಮಾನ | = ೪ ಸೊಲ್ಲಿಗೆ | ೧ ಕರ್ಷ | = ೪ ಸುವಣ್ಣ |
| ೧ ಸೊಲ್ಲಿಗೆ | = ೪ ಗದ್ದಿಗೆ | | |

## ೪.೭ ನೀರಾವರಿ ವ್ಯವಸ್ಥೆ :

೧) **ಕೆರೆಗಳು** ವ್ಯವಸಾಯಕ್ಕೆ ಮಳೆಯನ್ನೇ ಅವಲಂಬಿಸಿದರ ಸಾಲದು. ಅದಕ್ಕಾಗಿ ನದಿ, ಕೆರೆ, ಬಾವಿ, ಹಳ್ಳಗಳ ಮೂಲಕ ತಮ್ಮ ಬೆಳೆಗಳಿಗೆ ನೀರನ್ನು ಪೂರೈಸುತ್ತಿದ್ದಂತೆ ಗೊತ್ತಾಗುತ್ತದೆ. ಈ ಪದ್ಧತಿಯು ಪ್ರಾಚೀನ ಕಾಲದಿಂದಲೂ ಇದ್ದಿತೆನ್ನುವದಕ್ಕೆ ಆಧಾರಗಳಿವೆ. 'ಪತಂಜಲಿ ಮತ್ತು ಕೌಟಿಲ್ಯ' ಈ ಇಬ್ಬರೂ ನೀರಾವರಿಯ ಬಗ್ಗೆ ಹೇಳಿದ್ದಾರೆ.

ಕುಹುಂಡಿ ಮೂರು ಸಾಸಿರ ಪ್ರದೇಶದಲ್ಲಿ 'ಆನೆಕೆರೆ'ಯು, ಬೆಳಗಾವಿಯಲ್ಲಿ 'ತಾವರಗೆರೆ'ಯು, ನೇಸರಿಗೆಯಲ್ಲಿ 'ನಾಗರಕೆರೆ'ಯು, ಸೌಂದತ್ತಿಯಲ್ಲಿಯೂ, ತೇರದಾಳದಲ್ಲಿಯೂ ಒಂದು ಕೆರೆ ಇದ್ದಿತೆಂದು ಶಾಸನಗಳಿಂದ ಗೊತ್ತಾಗುತ್ತದೆ.

೨) **ಬಾವಿ** ಕೆರೆಗಳಂತೆ ಬಾವಿಗಳನ್ನು ತೋಡಿ ನೀರನ್ನು ಎತ್ತಿ ಬೆಳೆಗಳಿಗೆ ಒದಗಿಸುತ್ತಿದ್ದಂತೆ ಗೊತ್ತಾಗುತ್ತದೆ. ರಾಯಬಾಗದಲ್ಲೊಂದು ಬಾವಿ, ತೇರದಾಳಲ್ಲಿಯೊಂದು ಬಾವಿ, ಬೆಳಗಾವಿಯಲ್ಲೊಂದು 'ಹಾರೊಂಬುಬಾವಿ' ಎಂದರೆ ಸಾರ್ವಜನಿಕರಿಗಾಗಿ ಇರಬಹುದು.[೫೨]

೩) **ನದಿ** ಕೆರೆ, ಬಾವಿಗಳಿಂದಲ್ಲದೆ ನದಿಯಿಂದಲೂ ಭೂಮಿಗೆ ನೀರು ಒದಗಿಸುತ್ತಿರಬಹುದು. ಅದರಂತೆ ರಟ್ಟರ ಕಾಲದ ಶಾಸನಗಳಲ್ಲಿ 'ಮಲಪುಹಾರಿ' ಮಳಾಹಾರಿನದೀ ಎಂದು ಗೊತ್ತಾಗುತ್ತದೆ.

೪) **ಹಳ್ಳ** ನದಿ, ಕೆರೆ, ಬಾವಿಗಳಲ್ಲದೇ ಹಳ್ಳ, ತೀರ್ಥ, ಕಟ್ಟೆಗಳಿಂದ ನೀರನ್ನು ಉಪಯೋಗಿಸುತ್ತಿದ್ದು ಗೊತ್ತಾಗುತ್ತದೆ. ಬೆಳಗಾವಿಯ ಶಾಸನದಲ್ಲಿ 'ಹಳಂ' ಎಂದು ಹೇಳಲಾಗಿದೆ. ಇದು ಬಳ್ಳಾರಿ ಹಳ್ಳವಾಗಿರಬಹುದು. ಅರ್ಜುನವಾಡ ಶಾಸನದಲ್ಲಿ 'ತೀರ್ಥ'ದ ಹೆಸರು ಬರುತ್ತದೆ. 'ಅಗಸನಕಟ್ಟೆ'ಯ ಬಡ್ಲಿ ಶಾಸನದಲ್ಲಿ ಬರುತ್ತದೆ.

**ಅಡಿಟಿಪ್ಪಣಿಗಳು**

೧. ಲೀಲಾವತಿ ಪ್ರಬಂಧ, ಪು.ಸಂ. ೧೨೬

೨. S.I.I. IX: 88: 1034 AD

೩. Ep Ind Vol-XIII P-28

೪. Ep Ind Vol-XXXIII P-217

೫. ಗುರುವ ಎನ್.ಆರ್. **ಕ.ಭಾ. ಸಂಪುಟ** ೧೧, ಸಂಚಿಕೆ ೨ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ – ೧೯೭೮ ಪು.ಸಂ. ೪೦

೬. Ep Ind Vol-XIII P – 28

೭. JBBRAS Vol - X P-220

೮. ಅದೇ ಪು.ಸಂ ೨೨೦

೯. ಅದೇ ಪು.ಸಂ ೨೨೦

೧೦. ಇಚ್ಚಂಗಿ ಆರ್. **ಪಾರ್ಶ್ವನಾಥ ಪುರಾಣ: ಒಂದು ತೌಲನಿಕ ಅಧ್ಯಯನ,** ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ. – ೨೦೦೦ ಪು.ಸಂ. ೨೬೫

೧೧. E.C. VIII No. 56

೧೨. E.P. Vol.13

# ಅಧ್ಯಾಯ –೫

# ಸಮಾರೋಪ

ಪುರಾತತ್ವ ಆಕರಗಳಲ್ಲಿ ಶಾಸನಗಳು ಸಮಕಾಲೀನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮುಂತಾದ ವಿಷಯಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ತುಂಬಾ ಸಹಾಯಕವಾಗುತ್ತದೆ. ಈ ಹಿನ್ನಲೆಯಲ್ಲಿ ಸವದತ್ತಿಯ ರಟ್ಟರ ಶಾಸನಗಳನ್ನು ಒಂದೆಡೆಗೆ ಸಂಗ್ರಹಿಸಿ ಅವರ ಸಾಂಸ್ಕೃತಿಕ ಚರಿತ್ರೆಯನ್ನು ವಸ್ತುನಿಷ್ಠವಾಗಿ ಪುನರಚಿಸುವ ಉದ್ದೇಶದೊಂದಿಗೆ ಅನೇಕ ಹೊಸ ವಿಚಾರಗಳು ಸ್ಪಷ್ಟವಾಗಿವೆ.

ಕರ್ನಾಟಕವು ಪುರಾತನ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿದ್ದ ಪ್ರಾಚೀನ ನಾಡಾಗಿದೆ. ಇಲ್ಲಿರುವ ಅನೇಕ ಪ್ರದೇಶಗಳು ಹಲವಾರು ರಾಜಮನೆತನಗಳು ಹಾಗೂ ಸಾಮಂತರುಗಳ ಆಳ್ವಿಕೆಗೊಳಪಟ್ಟು ಸರ್ವಧರ್ಮಗಳ ಸಮನ್ವಯ ಸಾಧಿಸಿದ ಭೂಮಿಯಾಗಿದೆ.

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕ ಕೇಂದ್ರ ಸ್ಥಳವಾಗಿದೆ. ಈ ಪರಿಸರದ ಶಾಸನಗಳು, ಸ್ಮಾರಕಗಳು ಇಂದಿಗೂ ಮೂಕ ಸಾಕ್ಷಿಗಳಾಗಿ ಅಂದಿನ ಪರಂಪರೆಯನ್ನು ಪ್ರತಿಬಿಂಬಿಸುತ್ತದೆ.

ಸವದತ್ತಿಯ ರಟ್ಟರ ಚರಿತ್ರೆ ಮತ್ತು ಸಂಸ್ಕೃತಿಯನ್ನು ತಿಳಿಯುವಲ್ಲಿ ಶಾಸನಗಳು, ಕೋಟೆಗಳು, ದೇವಾಲಯಗಳು ಪ್ರಮುಖ ಮೂಲಾಧಾರಗಳಾಗಿವೆ. ಇವುಗಳ ಕಲೆಗೆ ದೊರೆತ ಪ್ರೋತ್ಸಾಹವನ್ನು ಸಾಮಾಜಿಕ ಹಾಗೂ ಧಾರ್ಮಿಕ ಸ್ಥಿತಿಯನ್ನು ತಿಳಿಸುವಲ್ಲಿ ಮಹತ್ವದ ಪಾತ್ರ ವಹಿಸಿವೆ. ಈವರೆಗೆ ಸವದತ್ತಿಯ ರಟ್ಟರ ಇತಿಹಾಸ ಅಧ್ಯಯನಕ್ಕೆ ಶಾಸನಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ ನಡೆದಿಲ್ಲ. ಈ ಹಿನ್ನಲೆಯಲ್ಲಿ ಕ್ಷೇತ್ರಕಾರ್ಯ ಮಾಡಿ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳ ಮಾಹಿತಿಗಳೊಂದಿಗೆ ಮಾಡಿದ ಪ್ರಯತ್ನ ಇದಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಸ್ವರೂಪಗಳ ಬಗ್ಗೆ ತಿಳಿಸಲಾಗಿದೆ. ಅಧ್ಯಯನ ಮಾಡಲು ಬೇಕಾದ ಆಕರಗಳು, ಪುರಾತತ್ವ ಆಕರಗಳು, ಸಾಹಿತ್ಯಿಕ ಆಕರಗಳ ಬಗ್ಗೆ ಸೆರೆಹಿಡಿಯಲಾಗಿದೆ. ಈ ಆಕರಗಳಿಂದ ಈ ಅಧ್ಯಯನದ ಅವಶ್ಯಕತೆಯನ್ನು ಅಧ್ಯಾಯ ಒಂದರಲ್ಲಿ ಹೇಳಲಾಗಿದೆ.

ಅಧ್ಯಾಯ ಎರಡರಲ್ಲಿ ಸವದತ್ತಿಯ ರಟ್ಟರ ರಾಜಕೀಯ ಬಗ್ಗೆ ಹಾಗೂ ಆರಂಭದ ರಾಜರ ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಶಾಸನಗಳ ಹಿನ್ನೆಲೆಯಲ್ಲಿ ಧಾರ್ಮಿಕ ವ್ಯವಸ್ಥೆಯ ಕುರಿತು ಚರ್ಚಿಸಲಾಗಿದೆ. ಬಹುತೇಕ ಶಾಸನಗಳು ದಾನ ಶಾಸನಗಳು, ವೀರಗಲ್ಲುಗಳು ವೈವಿಧ್ಯತೆಗಳನ್ನು ಒತ್ತಿ ಹೇಳಲಾಗಿದೆ. ಈ ಶಾಸನಗಳು ಅಂದಿನ ಧಾರ್ಮಿಕ ಪರಂಪರೆ ಹಾಗೂ ಸರ್ವಧರ್ಮಗಳ ಸಮನ್ವಯವನ್ನು ಬಿಂಬಿಸಿವೆ. ಇಲ್ಲಿ ಶೈವ ಪಂಥ, ವೈಷ್ಣವ ಪಂಥ ಮತ್ತು ಜೈನ ಪಂಥಗಳ ಹಾಗೂ ಶಾಕ್ತ ಪಂಥಗಳು ಅಸ್ತಿತ್ವದಲ್ಲಿದ್ದವು.

ಅಧ್ಯಾಯ ನಾಲ್ಕರಲ್ಲಿ ಸಾಮಾಜಿಕ ವ್ಯವಸ್ಥೆಯ ಕುರಿತು ಚರ್ಚಿಸಲಾಗಿದೆ. ಶಾಸನಗಳ ಹಿನ್ನಲೆಯಲ್ಲಿ ಅಂದಿನ ಸಾಮಾಜಿಕ ಪದ್ಧತಿಯಲ್ಲಿ ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನ, ಶಿಕ್ಷಣ, ರಾಜಕೀಯದಲ್ಲಿ ಹಾಗೂ ಆಡಳಿತದಲ್ಲಿ ಭಾಗವಹಿಸುತ್ತಿದ್ದರು.

ವ್ಯವಸಾಯ, ನೀರಾವರಿ, ಕೈಗಾರಿಕೆಗಳ ವೃತ್ತಿಗಳು, ತೆರಿಗೆ ಪದ್ಧತಿ, ನಾಣ್ಯ ಪದ್ಧತಿ ಹಾಗೂ ತೂಕ ಮತ್ತು ಅಳತೆಯ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹೀಗೆ ಸವದತ್ತಿಯ ರಟ್ಟರ ಶಾಸನಗಳು ಮತ್ತು ಸ್ಮಾರಕಗಳು ಪ್ರಾದೇಶಿಕವಾಗಿ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ಕೊಡುಗೆ ಸಲ್ಲಿಸಿವೆ. ಇಷ್ಟೆಲ್ಲ ಮಹತ್ವದ ವಿಷಯಗಳನ್ನು ಹೊರಗೆಡುವ ಈ ಅವಶೇಷಗಳು ಇಂದು ಅವಸಾನ ಅಂಚಿನಲ್ಲಿವೆ. ಕೆಲವು ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಲೀನವಾಗುತ್ತಿವೆ. ಇನ್ನೂ ಕೆಲವು ಸ್ಥಳೀಯರ ವಿವಿಧ ಮೂಢನಂಬಿಕೆಗಳಿಗೆ ಆಹುತಿಯಾಗುತ್ತಿವೆ. ಈ ಹಿನ್ನಲೆಯಲ್ಲಿ ಶ್ರೀಸಾಮಾನ್ಯರ ಇದರ ಅರಿವು ಮೂಡಿಸುವುದರಿಂದ ಇಲ್ಲಿಯ ಪ್ರಾಚೀನ ಇತಿಹಾಸ ರಕ್ಷಣೆಯಾದಂತಾಗುತ್ತದೆ.

# ಬೆಳಗಾವಿ ಜಿಲ್ಲೆಯ ನಕಾಶೆ



## ಸಾಂಸ್ಕೃತಿಕ ಪದಕೋಶ

ಅಗಸದರೆ = ಸಾರ್ವಜನಿಕರ ಬಟ್ಟೆ ತೊಳೆದು ಕೂಡುವ ಅಗಸರಿಗೆ ಹಾಕುವ ತೆರಿಗೆ

ಅಂಗಭೋಗ = ದೇವರಿಗೆ ಮುಟ್ಟಿ ಮಾಡುವ ಪೂಜೆ

ಅಗ್ರಮಹಿಷಿ = ಹಿರಿಯ ಹೆಂಡತಿ, ಮೊದಲನೆಯ ಹೆಂಡತಿ

ಅರುವಣ = ಅರ್ಧಪಣ; ಅರೆ ಬಣ, ಅರೆಕಾಸು, ಪುಡಿಕಾಸು

ಕುಮಾರ = ಯುವರಾಜ

ಘಟಸರ್ಪ = ದೊಡ್ಡ ಆಕಾರದ ನಾಗರಹಾವು

ಘಟೋದರ = ಶಕ್ತಿಶಾಲಿಯಾದವನು/ಳು ಸಮರ್ಥನಾದವನು/ಳು

ಜೋಳವಾಳಿ = ಅನ್ನದ ಕರ್ತವ್ಯ, ಅನ್ನದ ಋಣ

ದೊರೆಸಾನಿಯಾಗಿ = ಹಿರಿಯವರು ಪಟ್ಟರಾಣಿ

ನಾಟ್ಯಶಾಳೆ = ನರ್ತನ ಶಾಲೆ

ನೈರಿತಿ = ನೈರುತ್ಯ

ಪಾಜಿ = ಕರ್ತವ್ಯ

ಪ್ರಜಾಮಾಲನಂ = ಪ್ರಜೆಗಳ ಯೋಗಕ್ಷೇಮ

ಮಾತ್ಸ ನ್ಯಾಯ = ದೊಡ್ಡ ಮೀನು ಚಿಕ್ಕಮೀನನ್ನು ನುಂಗಿ ಹಾಕುವಂತೆ ಬಲಿಷ್ಟರು ದುರ್ಬಲರನ್ನು ಹಿಂಸಿಸುವುದು

ಮೇಂಟೆಗಂಡುಗ = ಧಾನ್ಯದ ರಾಣಗೆ ಹಾಕುತ್ತಿದ್ದ ಪಂಥ

ಮೇರೋ = ಗಡಿಯ ರೇಖೆ

ಯಾಪನಿ ಪಂಥ = ಜೈನಧರ್ಮದಲ್ಲಿ ಮೂರನೇಯ ಪಂಥ

ರಂಗಭೋಗ = ಹೊರಗಿನಿಂದ ಮಾಡುವ ನೈವೇದ್ಯ ಪೂಜೆ

ರಂಜ್ = ಸಂತೋಷಪಡಿಸು

ವಮ್ಮನ = ಮೊಮ್ಮಗ

ವಷ್ಟರಾವುಳ = ವ್ಯಾಪಾರ ಸಾಮಗ್ರಿಗಳಿಗೆ ಹಾಕುತ್ತಿದ್ದ ತೆರಿಗೆ

ಸುಗಂಧವರ್ತಿ = ಸಂವದತ್ತಿ



ಲಕ್ಷ್ಮೀದೇವನ ಶಾಸನ

(ಕಾಲಾವದಿ ಕ್ರಿ.ಶ.೧೨೨೮)



ಲಕ್ಷ್ಮೀದೇವನ ಶಾಸನ

(ಕಾಲಾವದಿ ಕ್ರಿ.ಶ.೧೨೨೬)



ಎರಡನೆಯ ಕಾರ್ತವೀರ್ಯ್ಯ ಶಾಸನ

(ಕಾಲಾವದಿ ಕ್ರಿ.ಶ.೧೧೯೬)





ಯಲ್ಲಮ್ಮ ದೇವಾಲಯದ ಹೊರಭಾಗ ಹಾಗೂ ಶಿಖರ





ಯಲ್ಲಮ್ಮ ದೇವಾಲಯದ ಹೊರನೋಟ ಹಾಗೂ ಹೊರ ಕಂಬಗಳು

## ಆನುಷಂಗಿಕ ಆಕರಗಳು


೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು

೨. Epigraphica Carnatica, Vols. XIV old edition

೩. Epigraphia Indica

೪. JBBRAS Vol-X

೫. I.A Vol-XXXII

೬. Karnataka Inscriptions, Vols, I, II, and III Karnataka University.

೭. M.A.R

೮. South Indian Inscription


## ಪ್ರಾಥಮಿಕ ಆಕರಗಳು


೧. ಆಲೂರು ವೆಂಕಟರಾಯ. ಕರ್ನಾಟಕ ಗತ ವೈಭವ, ಕ.ಇ. ಸಂಶೋಧನಾ ಮಂಡಲ, ಧಾರವಾಡ, ೧೯೬೩.

೨. ಕತ್ನಾಳೆ ಕೆ.ಎನ್. ಬೆಳಗಾವಿ ಜಿಲ್ಲೆ ಮತ್ತು ಜೈನಧರ್ಮ, ಸ್ನೇಹ ಪ್ರಕಾಶನ, ಧಾರವಾಡ, ೧೯೯೯.

೩. ಕಲಬುರ್ಗಿ ಎಂ.ಎಂ. ಜನಪದ ಸಾಹಿತ್ಯ ದರ್ಶನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೮೨.

೪. ಕಲಬುರ್ಗಿ ಎಂ.ಎಂ. ಆರ್.ಸಿ. ಹಿರೇಮಠ, ಶಾಸನ ಸಂಪದ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೪.

೫. ಕಾಮತ್ ಸೂರ್ಯಕಾಂತ. ಬೆಳಗಾವಿ ಜಿಲ್ಲೆ ಗೆಜೆಟಿಯರ್, ೧೯೮೭.

೬. ಕೆಂಪಣ್ಣವರ ಪಿ.ಜೆ. — ಜೈನ ಕ್ಷೇತ್ರಗಳ ಐತಿಹ್ಯಗಳು, ಪ್ರಕಾಶಕರು: ಕೆ.ಬಿ. ಕರ್ನವಾಡೆ. ಹಾರೋಗೇರಿ.

೭. ಗೋಪಾಲ ಆರ್. — ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೧೦.

೮. ಚಂದ್ರಕಾಂತ ನೀ. ಕೋಳಿಗುಡ್ಡೆ. — ಆರ್ಕ್ಯಲಾಜಿ ಆಫ್ ಚಿಕ್ಕೋಡಿ ಆಂಡ್ಯ ಗೋಕಾಕ ತಾಲೂಕ, ಅಪ್ರಕಟಿತ ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೫.

೯. ಚಿದಾನಂದಮೂರ್ತಿ ಎಂ. — ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ, ಬೆಂಗಳೂರು, ೨೦೧೪.

೧೦. ಪಾಟೀಲ ಎಸ್.ಬಿ. — ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಬಸವಶ್ರೀ ಪ್ರಕಾಶನ, ಸಂಕೇಶ್ವರ, ೧೯೯೫.

೧೧. ಬಸವರಾಜ ಕುಂಚೂರು. — ನಮ್ಮೂರ ಕೆರೆಗಳು, ಗ್ರಾಮೀಣ ದೇವತೆಗಳು, ಪ್ರಕಾಶನ ಕುಂಚನೂರು, ೨೦೦೯.

೧೨. ಮಂಜುನಾಥ ಬೇವಿನಕಟ್ಟಿ. — ನಂಬಿಕೆ ಮತ್ತು ಆಚರಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೧೩. ಮಲೆಘಟ್ಟ ಕೃಷ್ಣಮೂರ್ತಿ. — ಏಳುಕೊಳ್ಳದ ಎಲ್ಲಮ್ಮ, ಮೈಸೂರು ವಿಶ್ವವಿದ್ಯಾಲಯ, ೧೯೬೫.

೧೪. ಶಿವಾನಂದ ಗಾಳಿ, ಶ್ರೀಧರ ಹೆಗಡೆ ಭದ್ರನ್. — ಜಿನವಾಣಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೭.

೧೫. ಸಂಜಯ ಎನ್. ಹಂಜೆ. — ಗೋಕಾಕ ಪರಿಸರದಲ್ಲಿ ಜೈನಧರ್ಮ, ವಿದ್ಯಾಶ್ರೀ ಪ್ರಕಾಶನ, ಅಳಗವಾಡಿ, ೨೦೧೬.

೧೬. ಸುಂದರ ಅ. — ಕರ್ನಾಟಕದಲ್ಲಿ ಜೈನ ಶಿಲ್ಪ, ಕರ್ನಾಟಕ ಮತ್ತು ಜೈನ ಸಂಸ್ಕೃತಿ, ಕಲಘಟಗಿ ಟಿ.ಬಿ. ಧಾರವಾಡ, ೧೯೭೭.

೧೭. ಸುಂದರ ಅ. — ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿಯ ಪೂರ್ವಭಾವಿ ಇತಿಹಾಸ ಸಂಸ್ಕೃತಿಗಳು, ಇತಿಹಾಸ ದರ್ಶನ, ೧೯೯೬.

೧೮. ಹಂದೂರು ಬಿ.ಆರ್. — ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪ್ರಕಾಶಕರು ಹಂದೂರು ಬಿ.ಆರ್., ಹುಕ್ಕೇರಿ, ೨೦೦೩.

೧೯. ಹಂಪನಾ. — ಚಂದ್ರಕೊಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

